MADRAS GOVERNMENT ORIENTAL SERIES

PUBLISHED UNDER THE AUTHORITY OF
THE GOVERNMENT OF MADRAS.

*General Editor*

T. CHANDRASEKHARAN, M.A., L.T.,

Curator, Government Oriental Manuscripts Library,
Madras.

No. XXVI

# అష్టమతం

# RAṬṬAMATAM

Critically edited with Introduction

BY

H. SESHA IYENGAR,
*(Retd. Lecturer in Kannada, University of Madras.)*

---

GOVERNMENT ORIENTAL MANUSCRIPTS LIBRARY, MADRAS.

1950

[Price Rs. 4—4—0

# Introduction

The Government of Madras took up for consideration the question of publication of the various manuscripts in different languages on subjects like Philosophy, Medicine and Science, etc., early in May, 1948. Important manuscript libraries in the Madras Presidency were requested to send a list of unpublished manuscripts with them for favour of being considered by the Government for publication. The Honorary Secretary of the Tanjore Maharaja Serfoji's Sarasvathi Mahal Library, Tanjore, alone complied with this request. This list as well as a similar list of unpublished manuscripts in the Government Oriental Manuscripts Library, Madras, were carefully examined and a tentative selection of manuscripts suitable for publication was made. The Government in their Memorandum No. 34913/18-10, Education, dated 4-4-49, constituted an Expert Committee with the Curator of the Government Oriental Manuscripts Library, Madras, as the Secretary for the final selection of manuscripts suitable for printing and for estimating the cost of publication.

The following are the members of the Committee :—

1. Sri T. M. Narayanaswami Pillai, M.A., B.L.
2. ,, R. P. Sethu Pillai, B.A., B.L.
3. ,, C. M. Ramachandra Chettiar, B.A., B.L.
4. ,, R. Krishnamoorthy, (Kalki).
5. Dr. N. Venkataramanayya, M.A., Ph. D.
6. Sri M. Ramanuja Rao Naidu, M.A.
7. ,, V. Prabhakara Sastri.
8. ,, N. Venkata Rao, M.A.
9. ,, H. Sesha Ayyangar.
10. Sri Masti Venkatesa Ayyangar, M.A.
11. ,, M. Mariappa Bhat, M.A., L.T.
12. Dr. C. Achyuta Menon, B.A., Ph.D.
13. ,, C. Kunhan Raja, M.A., D.Phil.
14. ,, A. Sankaran, M.A., Ph. D., L.T.
15. Sri P. S. Rama Sastri.
16. ,, S. K. Ramanatha Sastri.
17. Dr. M. Abdul Haq, M.A., D. Phil., (Oxon).
18. Afzul-ul-Ulama Hakim Khader Ahamed.
19. Sri P. D. Joshi.
20. ,, S. Gopalan, B.A., B.L.
21. ,, T. Chandrasekharan, M.A., L.T.

The members of the Committee formed into Sub-Committees for the various languages, Sanskrit, Tamil, Telugu, Kannada, Malayalam, Marathi, and Islamic Languages. They met during the month of May, 1949, at Madras and at Tanjore to examine the manuscripts and make a selection. The recommendations of the Committee were accepted by the Government in G. O. No. Mis. 2745 Education, dated 31-8-1949, and they decided to call these publications as the "MADRAS GOVERNMENT ORIENTAL SERIES" and appointed the Curator, Government Oriental Manuscripts Library, Madras, as the General Editor of the publications.

The following manuscripts have been taken up for publication during the current year :—

**" A " From the Government Oriental Manuscripts Library, Madras.**

### TAMIL

1. KAPPAL S'ĀTTIRAM.
2. ANUBHAVA VAIDYA MURAI.
3. ĀTTĀNAKŌLĀHALAM.
4. UPADĒS'A KĀNDAM.
5. CŌLAN PŪRVA PAṬTAYAM.
6. KOṄGA DESA RĀJAKKAL.
7. S'IVAJNĀNA DĪPAM.

### TELUGU

1. SANGĪTARATNĀKARAMU.
2. AUṢADHA YŌGAMULU.
3. VAIDYA NIGHANṬUVU.
4. DHVNURVIDYĀ VILĀSAMU.
5. YŌGA DARS'ANA VIṢAYAMU.
6. KHAḌGA LAKṢAṆA S'IRŌMAṆI.

### SANSKRIT

1. VIṢANĀRĀYAṆĪYAM.
2. BHĀRGHAVA NĀḌIKA.
3. HARIHARACATURANGAM.
4. BRAHMA SŪTṚAVṚTTI MITĀKṢARA.
5. NYĀYASIDDHĀNTA TATVĀMṚTAM

### MALAYALAM

1. GARBHA CIKITSA.
2. a. VĀSTULAKṢAṆAM.
   b. S'ILPAVIṢAYAM.
3. MAHĀSĀRAM.
4. KAṆAKKUSĀRAM
5. KAṆAKKUSĀRAM - BĀLAPRABODHAM.
6. KRIYĀKRAMAM.

### KANNADA

1. LŌKŌPAKĀRA.
2. RAṬṬAMATA.
3. AS'VAS'ĀSTRA.
4. a. AUṢADHAGALU.
   b. VAIDYAVISAYA.
5. SANGĪTARATNĀKARA.
6. SŪPAS'ĀSTRA.

### ISLAMIC LANGUAGES

1. JAMI—AL—ASHYA.
2. TIBB—E—FARIDI.
3. TAHQIQ—AL—BUHRAN.
4. SAFINAT—AL—NAJAT.

"B" From the Tanjore Maharaja Serfoji Saraswathi Mahal Library, Tanjore.

### TAMIL

1. S'ARABENDRA VAIDYA MURAI, (Dibates).
2. do (Eyes).
3. AGASTIYAR
4. KONKAṆARSARAKK VAIPPU.
5. TIRUCHITRĀMBALAKKAVAIYPR, with padavurai.
6. KALACHAKRAM.
7. TAṬVASAMUDRAM.
8. BHĀRATANĀṬYAM.
9. a. PUNḌIKELI VILĀSAM.
   b. PVRŪRAVA CAKRAVARTI NĀṬAKAM.
   c. MADANA SUNDARA VILĀSA NĀṬAKAM.
   d. PERCY MACQUEEN'S COLLECTION in the Madras University Library on Folklore.
10. RĀMAIYAN AMMANAI.
11. TAMIL PADALKAL including Pattinattar Venda and Vannankal.

### TELUGU

1. KĀMANDAKANĪTISĀRAMU.
2. TĀLADAS'APRĀṆAPRADĪPIKA.
3. a. RAGHUNĀTHA NAYAKĀBHYUDAYAMU.
   b. RAJAGŌPĀLA VILĀSAMU.
4. RĀMĀYAṆAMU, by Kaṭṭā Varadarāju.

### MARATHI

1. NĀṬYAS'ĀSTRA SANGRAHA.
2. a. BOOK OF KNOWLEDGE.
   b. FOLK SONGS.
   c. DORA DARUN VENI PADDHATI.
   d. ASVA CATULA DUMANI.
3. a. PRATĀPASIMHENDRA VIJAYA PRABANDHA.
   b. S'ARABHĒNDRA THIRTHĀVALI.
   c. LĀVAṆI.
4. DEVENDRA KURAVANGI.
5. BAKTA VILĀSA.
6. SLOKA BANDHANA RĀMĀYANA.

## SANSKRIT

1. AS'VAS'ĀSTRA with Tricolour illustrations.
2. RĀJAMṚGĀṄKA.
3. CIKITSĀMṚTASĀGARA.
4. ĀYURVEDĀMAHŌDADHI.
5. GĪTA GŌVINDA ABHINAYA.
6. a. CŌLACAMPU.
   b S'ĀHENDRAVILĀSA.
7. DHARMĀKŪTAM—Sundara Kāṇḍa.
8. JĀTAKASĀRA.
9. VIṢṆUTATTVANIRNAYA VYAKHYA.
10. SANGĪTA DARPAṆA.
11. BIJAPALLAVA.

It is hoped that the publication of most of the important manuscripts will be completed within the next four years.

Some of the manuscripts taken up for publication are represented by single copies in the Library and consequently the mistakes that are found in them could not be corrected by comparing them with other copies. The Editors have however, tried their best to suggest correct readings. The wrong readings are given in round brackets and correct, readings have been suggested in square brackets. When different readings are found, they have been given in the footnotes except in the case of a few books in which the correct readings have been given in the footnote or incorporated in the text itself.

Thi Government of Madras have to be thanked for financing the entire scheme of publication although there is a drive for economy in all the depart ments. My thanks are due to the members of the Expert Committee who spared no pains in selecting the manuscripts for publication. I have also to thank the various editore who are experts in their own field, for readily consenting to edit the manuscripts and see them throuh the press. The various presses that have co-operated in printing the manuscripts in the best manner possible also deserve my thanks for the patience exhibited by them in carrying out the corrections made in the proofs.

This edition of Rattamata is based on the three palm-leaf manuscripts bearing D. No. 1549, 1550 and 2139 preserved in the Government Oriental Manuscripts Library, Madras. The Press copy was also collated with a paper Manuscript belonging to Pandit H. Shesha Iyengar. A brief but scholarly intruduction in Kannada together with the table of contents prepared by the editor is appended to this work.

Govt. Oriental Manuscripts Library,
Madras

T. CHANDRASEKHARAN,
*General Editor,*
*Madras Govt. Oriental Series.*

# ಮುನ್ನುಡಿ

## ೧. ಮುದ್ರಣ ವಿಚಾರ

ಅಟ್ಟಶಾಸ್ತ್ರ(ಮತ) ವೆಂಬ ಈ ಗ್ರಂಥವು ೫ (ಅಯ್ದು) ಹಸ್ತಲಿಖಿತ ಪ್ರತಿಗಳ ಆಧಾರದಿಂದ ಮುದ್ರಿತವಾಗಿದೆ. ಎಲ್ಲ ಪ್ರತಿಗಳೂ ಅಸಂಪೂರ್ಣಗಳು; ಅಶುದ್ಧಪಾಠಭೂಯಿಷ್ಠಗಳು; ಅಲ್ಲಲ್ಲಿ ಗಳಿತ ಮತ್ತು ತ್ರುಟಿತ ಪತ್ರಗಳುಳ್ಳವು. ಎಲ್ಲ ಪ್ರತಿಗಳ ಪಾಠಗಳನ್ನೂ ಯಥಾಮತಿ ಪರಿಶೀಲಿಸಿ ಸಾಧುವಾದುವೆಂದು ತಿಳಿದುಬಂದ ಪಾಠಗಳನ್ನು ಮುದ್ರಿಸಿ, ಉಳಿದ ಪಾಠಗಳನ್ನು ಹಸ್ತಲಿಖಿತ ಪ್ರತಿಗಳ ಸ್ವರೂಪ ಪರಿಜ್ಞಾನಕ್ಕಾಗಿ ರೇಖೆಯ ಕೆಳಗೆ ಕೊಟ್ಟಿದೆ. ಹೊಸದಾಗಿ ಊಹಿಸಿ ಸೇರಿಸಿದ ಭಾಗವನ್ನು ಚೌಕ ಕಂಸಗಳಲ್ಲಿಯೂ, ಒಂದೆರಡು ಅಕ್ಷರಗಳ ಮಾರ್ಪಾಡನ್ನು ದುಂಡು ಕಂಸಗಳಲ್ಲಿಯೂ ಕೊಟ್ಟಿದೆ. ಕೊನೆಯಲ್ಲಿ ೧ (a) ಪರಿಶಿಷ್ಟದಲ್ಲಿ ಗ್ರಂಥಸ್ಥ ವೃತ್ತಜಾತಿಗಳ ಸಂಖ್ಯೆಗಳನ್ನುತೋರಿಸುವ ಪಟ್ಟಿಕೆಯನ್ನೂ, (b) ಯಲ್ಲಿ ರಾಹುಚಕ್ರ-ನಕ್ಷತ್ರ ಚಕ್ರಗಳೆಂಬ ಚಿತ್ರ ಪಟಗಳನ್ನೂ, ೨ನೆಯ ಪರಿಶಿಷ್ಟದಲ್ಲಿ ಗ್ರಂಥಸ್ಥ ಪದ್ಯಜಾತಿಗಳ ಅಕಾರಾದ್ಯಕ್ಷರಗಳ ಪಟ್ಟಿಕೆಯನ್ನೂ, ಮೂರನೆಯ ಪರಿಶಿಷ್ಟದಲ್ಲಿ "ಅಟ್ಟಮತ" ವೆಂಬ ಹೆಸರಿನ ಒಂದೆರಡು ಹಸ್ತಲಿಖಿತ ಪ್ರತಿಗಳ ಆದ್ಯಂತಗಳಲ್ಲಿರುವ ಸಂವತ್ಸರ ಫಲಗಳನ್ನು ತಿಳಿಸುವ ಗ್ರಂಥ ಭಾಗವನ್ನೂ ಕೊಟ್ಟಿದೆ. ಇನ್ನೂ ಅಲ್ಲಲ್ಲಿ ಅಲ್ಪ ಸ್ವಲ್ಪ ಗ್ರಂಥಪಾತಗಳೂ, ಅಶುದ್ಧ ಪಾಠಗಳೂ ಇವೆ, ಮತ್ತು ಗ್ರಂಥವು ಸಮಾಪ್ತವೆಂದು ಒಂದೆರಡು ಪ್ರತಿಗಳಲ್ಲಿ ಬರೆದಿದ್ದರೂ, ಉಪಸಂಹಾರ ಪದ್ಯಗಳಿಲ್ಲದಿರುವುದರಿಂದ ಇನ್ನೂ ಗ್ರಂಥ ಭಾಗವಿರಬೇಕೆಂದು ತೋರುವುದು. ಮುಂದೆ ಬೇರೆ ಬೇರೆ ಹಸ್ತಲಿಖಿತಪ್ರತಿಗಳು ದೊರಕಿದರೆ ಪುನರ್ಮುದ್ರಣದಲ್ಲಿ ಈ ದೋಷಗಳೆಲ್ಲವನ್ನೂ ದೂರೀಕರಿಸಬಹುದು.

೧ನೆಯ ಪ್ರತಿ—ಇದು ಮದ್ರಾಸ್ ಸರ್ಕಾರದ ಲೈಬ್ರರಿಯಲ್ಲಿರುವ D. N. 2139 ನಂಬರಿನ ಓಲೆಯ ಪ್ರತಿ, ಇದರಲ್ಲಿ 88 ಪತ್ರಗಳಿವೆ, ಅಶುದ್ಧಪಾಠಭೂಯಿಷ್ಠವಾದ ಈ ಪ್ರತಿಯಲ್ಲಿ ಗ್ರಂಥಪಾತಗಳೂ ಅಲ್ಲಲ್ಲಿವೆ (ಕೆಲವನ್ನು ಟಿಪ್ಪಣಿಯಲ್ಲಿ ಸೂಚಿಸಿದೆ). ಇದು ಅಸಂಪೂರ್ಣ ಗ್ರಂಥ – "ಪುಣ್ಣಿಮೆ ಕುಸಿದೊಡೆ" ಎಂಬ ಪದ್ಯದವರೆಗೆ ಮಾತ್ರ ಇದೆ. ಪದ್ಯ ಸಂಖ್ಯೆ ೫೬೬. ಮುಂದಣ ಓಲೆಯಲ್ಲಿ "ಕಪ್ಪೆ ಕರೆವೊಡಂ" ಎಂಬ ಗ್ರಂಥಾದಿಯ ರಗಳೆಯಿದೆ. ಇದು ಸುಮಾರು ನೂರಾರುವರ್ಷಗಳ ಹಿಂದೆ ಬರೆದಿರುವ ಅರ್ವಾಚೀನ ಪ್ರತಿಯೆಂದು ಅಕ್ಷರಗಳ ಸ್ವರೂಪದಿಂದೂಹಿಸಬಹುದು. ಇದರ ಆಧಾರದಿಂದಲೇ ಲೈಬ್ರರಿಯ ಕ್ಯೂರೇಟರು ಮುದ್ರಣದ ಪ್ರತಿಯನ್ನು ತಯಾರಿಸಿಕೊಟ್ಟು, ಶ್ರೀಮಾನ್ ಪಂಡಿತ ಮುಳಿಯ ತಿಮ್ಮಪ್ಪಯ್ಯನವರಿಗೆ (ಮಂಗಳೂರು ಸೆಂಟ್ ಅಲೂಷಿಯಸ್ ಕಾಲೇಜಿನ ರಿಟೈರ್ಡ್ ಕನ್ನಡ ಪಂಡಿತರು) ಇದರಸಂಪಾದಕತ್ವವನ್ನು ಒಪ್ಪಿಸಿದ್ದರು. ಅವರು ಅಲ್ಲಲ್ಲಿ ಒಂದೆರಡು ಅಕ್ಷರಗಳ ಮಾರ್ಪಾಡನ್ನು ಮಾತ್ರ ಕೆಂಪುಮಸಿಯಲ್ಲಿ ಗುರ್ತಿಸಿದ್ದರೇ ವಿನಾ,ಗ್ರಂಥಪಾತಾದಿಗಳನ್ನು ಸರಿಪಡಿಸಿರಲಿಲ್ಲ. ಸರಿಪಡಿಸಲು ಅವರು ಬೇರೆ ಪ್ರತಿಗಳಿಗೂ ಪ್ರಯತ್ನಿಸಲಿಲ್ಲ. ಇಷ್ಟರಲ್ಲಿ ದೇಹಾಲಸ್ಯದಿಂದ ನಿಶ್ಶಕ್ತರಾಗಿ, ಅವರು ಗ್ರಂಥವನ್ನು ಹಿಂದಕ್ಕೆ ಕಳುಹಿಸಿಕೊಟ್ಟರು. ಬಳಿಕ ಇದರ ಮುದ್ರಣ ಕಾರ್ಯಭಾರವು ನನ್ನ ಮೇಲೆ ಹೊರಿಸಲ್ಪಟ್ಟಿತು. ನಾನು ಮೈಸೂರು ಸರ್ಕಾರದ ಲೈಬ್ರರಿಯ ಪ್ರತಿ ಮತ್ತು ಆರಾ ಲೈಬ್ರರಿಯ ಓಲೆಯ ಪ್ರತಿ ಇವುಗಳ ಸಹಾಯದಿಂದ ಪ್ರಕೃತಮುದ್ರಣವನ್ನು ನಿರ್ವಹಿಸಿರುವೆನು.

೨ನೆಯ ಪ್ರತಿ—ಇದು ಇದೇ ಲೈಬ್ರರಿಯಲ್ಲಿರುವ ಮತ್ತೊಂದು ಪ್ರತಿ (D. N. 1540) ತುಂಬಾ ಪ್ರಾಚೀನವಾದುದು, ಇದರಲ್ಲಿ ಓಲೆಯ ಸಂಖ್ಯೆ 41 ರಿಂದ ಆರಂಭವಾಗಿದೆ. ನುಸಿ ಹುಳಗಳ ಬಾಯಿಗೆ ತುತ್ತಾಗದ ಮತ್ತು ತ್ರುಟಿತವಾಗದಿರುವ ಓಲೆಗಳು ಒಂದೂ ಇದರಲ್ಲಿ ಸಿಕ್ಕುವುದಿಲ್ಲ. ಕಷ್ಟದಿಂದ ಕೆಲವು ಪಾಠಗಳನ್ನು ಇದರಿಂದ ಆರಿಸಿಕೊಂಡಿದೆ. ಗ್ರಂಥಾರಂಭವು ೪೨ನೆಯ ಓಲೆಯಲ್ಲಿ ಕಂಡುಬರುವುದು. ೪೮ ಪದ್ಯ ಸಂಖ್ಯೆಯಾದ ಬಳಿಕ ೪೮ನೆಯ ಓಲೆಯಲ್ಲಿ "ಶಕುನಾಧ್ಯಾಯಂ ಸಮಾಪ್ತಂ – ವಾಯುಚಕ್ರಮಂ ಪೇಳ್ವೆಂ – ಉತ್ಪಲಮಾಲಾ ಪದ್ಯ ಸಂಖ್ಯೆ ೭೧" ಎಂದಿದೆ. ಮುಂದೆ "ಮಾರ್ಗಶೀರ್ಷ ಮಾಸದ ಫಲಂ" ಎಂಬಲ್ಲಿ "ಮಟಿಕೊಳ್ಗುಂ" ಎಂಬ ಪದ್ಯಾಂತ್ಯದಲ್ಲಿ ೪೦೦ ಎಂಬ ಪದ್ಯ ಸಂಖ್ಯೆಯನ್ನು ಕೊಟ್ಟು, ಪದ್ಯ ಚಂಪಕ "ರತಿ ಮಾರ್ಗಶೀರ್ಷ ಕಾಳದ" ಎಂಬ ಪದ್ಯವನ್ನಾರಂಭಿಸಿ, ವೃಷಭ ಪ್ರವೇಶದ ಪದ್ಯ ೩೦ರಲ್ಲಿ ಗ್ರಂಥವು ನಿಂತಿದೆ.

೩ನೆಯ ಪ್ರತಿ—ಇದೇ ಲೈಬ್ರರಿಯ ಈ ಓಲೆಯ ಪ್ರತಿಯಲ್ಲಿ ಜಟ್ಟಮವೆಂಬ ಗ್ರಂಥದ ಅರ್ಧರ್ಧ ಭಾಗ ಮುರಿದಿರುವ ೩ ಓಲೆಗಳಿವೆ. ಇದರಲ್ಲಿ ಪರಿಶಿಷ್ಟದಲ್ಲಿ ಕೊಟ್ಟಿರುವ ಗ್ರಂಥಭಾಗ ವಿರುವುದು.

೪ನೆಯ ಪ್ರತಿ—ಇದು ಮೈಸೂರು ಲೈಬ್ರರಿಯಲ್ಲಿರುವ A. 42 ನಂಬರಿನ ಕಾಗದದ ಪ್ರತಿ. ಇದರಲ್ಲಿ ಅಶುದ್ಧ ಪಾಠಗಳೂ ಅಲ್ಲಲ್ಲಿ ಗ್ರಂಥಪಾತಗಳೂ ಇವೆ. ಕೊನೆಯಲ್ಲಿ ಪದ್ಯ ಸಂಖ್ಯೆ ೮೩೭ ಎಂದಿದೆ. ಸಂಖ್ಯೆಯು ಅಷ್ಟು ಖಚಿತವಾಗಿಲ್ಲ. ಮುಂದೆ ಗ್ರಂಥವು "ಶ್ರೀಪತಿ ಪಸುಪತಿ" ಪದ್ಯದಿಂದ ಆರಂಭವಾಗಿ (೮೩೮) ೮೪೮ರ ವರೆಗೆ ಸಂವತ್ಸರ ಫಲವನ್ನು ಹೇಳುವ ಕಂದ ಭಾಗ ಗಳಿವೆ. ಗ್ರಂಥವು ಮುಂದೆಯಿಲ್ಲ.

೫ನೆಯ ಪ್ರತಿ—ಆರಾ (ಉತ್ತರದೇಶದ) ಜೈನ ಲೈಬ್ರರಿಯಲ್ಲಿರುವ ಪ್ರತಿ ೬೫ ಓಲೆಯ ಪತ್ರಗಳಿವೆ. ಗ್ರಂಥವು ೫ನೆಯ ಓಲೆಯಿಂದ ಆರಂಭವಾಗಿದೆ. ಒಂದು ಓಲೆಯಲ್ಲಿ ೮ ಪಙ್ಕ್ತಿಗಳೂ ಪ್ರತಿಯೊಂದು ಪಙ್ಕ್ತಿಯಲ್ಲಿ ೬೪ ಅಕ್ಷರಗಳೂ ಇವೆ. ಆದಿಯಲ್ಲಿ ಗಳಿತವಾಗಿರುವ ಓಲೆಗಳಲ್ಲಿ ೬೦ ವರ್ಷಗಳ ಫಲವನ್ನು ಹೇಳುವ ಕಂದಗಳಿವೆ. ಈ ಕಂದಗಳಲ್ಲಿ ವಿಶ್ವಾವಸು ಸಂವತ್ಸರದಿಂದ ಗ್ರಂಥವು ಉಪಲಬ್ಧವಾಗಿದೆ. ಪದ್ಯ ಸಂಖ್ಯೆ ೬೩ರರಿಂದಿದೆ. ಈ ಗ್ರಂಥದ ಆದಿಭಾಗವು ಮೈಸೂರ್ ಪ್ರತಿಯ ಕೊನೆಯಲ್ಲಿದೆ, ಎರಡು ಪ್ರತಿಗಳ ಆದ್ಯಂತ ಭಾಗಗಳನ್ನೂ ಸೇರಿಸಿ ಪರಿಶಿಷ್ಟ ನಾಲ್ಕರಲ್ಲಿ ಕೊಟ್ಟಿದೆ. ನಡುವೆ ೧೨ ವರ್ಷಗಳ ಫಲವು ಎರಡು ಪ್ರತಿಗಳಿಂದಲೂ ದೊರಕಲಿಲ್ಲ. ಕೊನೆಯಲ್ಲಿ "ಅಂತುರಗಳೆ ಹೊರತಾಗಿ, ಪದ್ಯ ೭೧೧ – ರಗಳೆ ಸಹ ಗ್ರಂಥ ಲೆಕ್ಕ ೧೬೨೫ (೨೬೨೫?) ಕ್ಕಂ ಜಟ್ಟಸಮಾಪ್ತಂ ಮಂಗಳ ಮಹಾಶ್ರೀ" ಎಂದಿದೆ.

ಮೈಸೂರು ನಿವಾಸಿಗಳಾದ ಶ್ರೀಮಾನ್. ಬೊಮ್ಮರಸ ಪಂಡಿತರಲ್ಲಿದ್ದ ಕಾಗದದ ಪ್ರತಿಯು ಆರಾ ಪ್ರತಿಯ ಪ್ರತ್ರಿಕೆಯೆಂದು ತೋರಿಬರುವುದರಿಂದ ಅದರ ಒತ್ತಾಸೆಯು ಅಷ್ಟು ಪ್ರಯೋಜನ ಕಾರಿಯಾಗಿಲ್ಲ.

* ಮೈಸೂರು ಸರ್ಕಾರಿ ಲೈಬ್ರರಿಯಲ್ಲಿ 'ಜಟ್ಟಶಾಸ್ತ್ರವೆಂಬ ಎರಡು ಓಲೆಯ ಪ್ರತಿಗಳಿವೆ (ನಂ. ೨೦೬, ೯೬೦). ಅದರಲ್ಲಿ ಪ್ರಭವಾದಿ ೬೦ ವರ್ಷಗಳ ಫಲವನ್ನು ವಚನರೂಪದಲ್ಲಿ ಕೊಟ್ಟಿದೆ.

## ೨. ಗ್ರಂಥ ಮತ್ತು ಗ್ರಂಥಕರ್ತೃವಿನ ವಿಚಾರ

### (*a*) ಗ್ರಂಥವಿಚಾರ

ಈ ಗ್ರಂಥಕ್ಕೆ "ಜಿಟ್ಟಶಾಸ್ತ್ರ"[1] ಅಥವಾ "ಜಿಟ್ಟಮತ" ವೆಂದು ಹೆಸರು. ಗ್ರಂಥಕರ್ತೃವೇ ಈ ಗ್ರಂಥದಲ್ಲಿ ಕೆಲವೆಡೆಗಳಲ್ಲಿ [2]"ಜಿಟ್ಟಸೂತ್ರ" (ಜಿಟ್ಟನ ಸೂತ್ರ), [3]"ಜಿಟ್ಟಮತ" (ಜಿಟ್ಟನಿಷ್ಟ) ಎಂದು ಹೇಳಿರುವನು. ಜಿಟ್ಟನೆಂಬವನು ಹೇಳಿದ ಶಾಸ್ತ್ರ ಅಥವಾ ಜಿಟ್ಟನಮತ ಎಂಬರ್ಥವನ್ನು ಕೊಡುವ ಈ ಹೆಸರು ಈ ಗ್ರಂಥಕ್ಕೆ ಪ್ರತಿಪಾದ್ಯ ವಿಷಯವನ್ನು ತಿಳಿಸುವ ಅನ್ವರ್ಥನಾಮವಾಗುವುದಿಲ್ಲ. ಮಳೆಯ ಕುಱುಹನ್ನು (ಮಳೆ ಬೀಳದಿರುವುದು, ಮಳೆ ಬೀಳುವುದು ಇವಕ್ಕೆ ತಕ್ಕ ನಿಮಿತ್ತವನ್ನು) ತಿಳಿಸುವ ಈ ಗ್ರಂಥಕ್ಕೆ [4]"ಮಳೆಯ ಕುಱುಹು" ಅಥವಾ "ವೃಷ್ಟಿಶಾಸ್ತ್ರ" ಎಂಬ ಹೆಸರು ಅನ್ವರ್ಥವಾಗುವುದು. ಅಲ್ಲದೆ ಕವಿಯೇ [5]"ಮೇಘಾಡಂಬರ" "ಮೇಘಮಾಲೆ"[6] ಎಂಬ ಹೆಸರುಗಳನ್ನೂ ಒಂದೆರಡುಕಡೆ ಗ್ರಂಥದಲ್ಲಿ ಸೂಚಿಸಿರುವನು. ಪ್ರಾಯಶಃ, ಇವು ಇದರ ಮೂಲಗ್ರಂಥಗಳಾದ ಸಂಸ್ಕೃತಗ್ರಂಥಗಳ ಹೆಸರಿರಬಹುದು.

ಈ ಗ್ರಂಥವು ವೃತ್ತಕಂದಗಳಲ್ಲಿ ಬರೆಯಲ್ಪಟ್ಟಿದೆ. ಕೆಲವು ರಗಳೆಗಳೂ, ಒಂದೆರಡು ವಚನಗಳೂ ಇವೆ. ಕನ್ನಡ ಭಾಷೆಗೆ ಮೀಸಲಾದ ಪಿರಿಯಕ್ಕರತ್ರಿಪದಿಗಳೂ ವಿಶೇಷವಾಗಿ ಇವೆ. ಕವಿಯು ತನ್ನ ಹೆಸರು [7]ಜಿಟ್ಟಗನೆಂದೂ, ಭೂತುಗನಣುಗಂ ಎಂದು ಹೇಳಿಕೊಂಡು, "ಅಭಯಾಂಬುಧಿಯು ನಿಜ ಸುತೆಗೆ ಚಂದ್ರಲೇಖೆಗೆ ಮೇಘಾಡಂಬರಮಂ ಪೇಳ್ದಪಂ" ಎಂದು ತನ್ನ ಮಗಳನ್ನು ಕುರಿತು ಹೇಳಿದಂತೆ ಹೇಳಿರುವನು; ಗ್ರಂಥದಲ್ಲಿ ಅಲ್ಲಲ್ಲಿ ದೊರಕುವ [8]ಸ್ತ್ರೀ ಸಂಬೋಧನಾ ಶಬ್ದಗಳೂ ಈ ವಿಷಯವನ್ನು ದೃಢಪಡಿಸುವುವು. ಮತ್ತು ಪ್ರ. ೩೩ನೆ ಪದ್ಯದಲ್ಲಿ "ಪುರಾಣಚಾರ್ಯರು ಹೇಳಿದ ಮಳೆಯ ಕುರಿಪನ್ನು ಚಂದಿರಭಟ್ಟರ ದಯೆಯಿಂದ ಸಂದೇಹವಿಲ್ಲದಂತೆ ತಿಳಿದುಕೊಳ್ಳಬೇಕು" ಎಂದು ಹೇಳಿರುವುದರಿಂದ ಚಂದಿರಭಟ್ಟ ಎಂಬ ಹೆಸರೂ ಕವಿಗಿರಬಹುದೆಂದು ತೋರುವುದು. ಅಥವಾ ಚಂದಿರಭಟ್ಟನೆಂಬ ಒಬ್ಬ ಆಚಾರ್ಯನಿದ್ದನೆಂದಾದರೂ ಊಹಿಸಬಹುದು.

ಈ ಗ್ರಂಥವು ಕವಿಯ ಸ್ವತಂತ್ರ ಗ್ರಂಥವಲ್ಲ. ಹಲವು ಸಂಸ್ಕೃತ ಸಂಹಿತೆಗಳ ಆಧಾರದಿಂದ ಇದನ್ನು ಬರೆದಿರುವೆನೆಂದು ಕವಿಯೇ ಪ್ರಥಮಾಶ್ವಾಸದ ೩೪ನೆಯ ಪದ್ಯದಲ್ಲಿ ತಾನು ಆಧಾರವಾಗಿ ತೆಗೆದುಕೊಂಡಿರುವ ಸಂಹಿತೆಗಳನ್ನು ಹೇಳಿರುವನು– ರತ್ನೋಜ್ವಲ ಸಂಹಿತೆ, ಧನಕೀರ್ತಿ ಸಂಹಿತೆ, ವರಾಹಮಿಹಿರ ಗಾರ್ಗ್ಯಾಚಾರ್ಯರ ಮತ(ಸಂಹಿತೆಗಳು)–ಇವು ಈತನ ಗ್ರಂಥಕ್ಕೆ ಆಧಾರಗಳು. (ಪ್ರ.೩೪) ಮತ್ತು ಕವಿಯು ಗ್ರಂಥದಲ್ಲಿ ಅಲ್ಲಲ್ಲಿ ಈ ಸಂಹಿತಾಕರ್ತರ ಹೆಸರನ್ನು

---

1 ಇದು ಹಸ್ತಲಿಖಿತ ಪ್ರತಿಗಳ ಆದ್ಯಂತ ಬರೆಹಗಳಿಂದ ತಿಳಿದುಬರುವುದು, ಒಂದು ಪ್ರತಿಯಲ್ಲಿ "ಜೈನ ಜಿಟ್ಟಮತಶಾಸ್ತ್ರ ಬರೆಯುವುದಕ್ಕೆ ಶುಭಮಸ್ತು" ಎಂದಿದೆ. ಮತ್ತೊಂದು. ಪ್ರತಿಯ ಕೊನೆಯಲ್ಲಿ "ಜಿಟ್ಟ ಸಮಾಪ್ತಂ" ಎಂದಿದೆ. 2 ಜಿಟ್ಟನೆಂದ ಸೂತ್ರಕ್ರಮದಿಂ (ಪ್ರ-೩೦, ಅಷ್ಟ-೪೪, ದ್ವಾ-೪). ಜಿಟ್ಟಕಂದರ್ಪನ ಸೂತ್ರೋಪ್ಪದಿಂ (ಅ. 61) 3 ಜಿಟ್ಟನಿಷ್ಟದಿಂ (ಷ-೨೩, ೩೬.) ಜಿಟ್ಟನಮತದಿಂ (ಅ–೬೨.)ಸ. ೨೩. 4 ಭಾವಿಸಿ ಪೇಳ್ದಂ ಮಳೆಯ ಕುಱುಪ ನೊಳ್ಪಿನ ಜಿಟ್ಟಂ (ಪ್ರ-೩೫). 5 ಪರಮಶ್ರೀ ಮೇಘಾಡಂ ಬರಮಂ ವಿರಚಿಸಿದ ಮಳೆಯ ಕುಱುಪಿನ ಕಡೆಯೊಳ್ (ದ್ವಾ–೧೧), ಧರೆ ಬಣ್ಣಿಸೆ ಮೇಘಾಡಂಬರದೊಳ್ ವಿರಚಿಸಿದ (ಪ್ರ–೨೬). 6 ಸಲೆ ಮೇಘಮಾಲೆಯನುನಯದಿಂದಂ(ಪ್ರ–೩೪), 7 ನಿಜಸುತೆಗೆ ಚಂದ್ರಲೇಖೆಗೆ ಮೇಘಾಡಂಬರಮನತಿಶಯೋಕ್ತಿಯಿನಿಂಬಾಗಿ ತಿಳಿಯೆ ಪೇಳ್ದಪಂ ಕನ್ನಡದಿಂ (ಪ್ರ-೨೪ ೨೫), ನಿಜತನೂಜೆಗೆ ಪೇಳ್ದುದ ತಪ್ಪಲಕ್ಕುಮೇ (ಸ-೧೪೬). 8 ವನಜಾಕ್ಷೀ ಸೌರಿಯಲ್ಲಿಂ(ದ್ವಾ–೯೪), ನಳಿನಾಕ್ಷೀ ಶನಿ (ದ್ವಾ–೯೮)

ಹೇಳಿರುವನಲ್ಲದೆ, [1]ಕಪಿಲ, ಪಿಂಗಳ, ನವಕೀರ್ತಿ ಎಂಬ ಮತ್ತೆ ಕೆಲವು ಸಂಸ್ಕೃತ ಸಂಹಿತಾಕರ್ತರ ಹೆಸರನ್ನೂ ಹೇಳಿರುವನು. (ದ್ವಾ. ೧೦೦) ಪದ್ಯದಲ್ಲಿ "ಸೋಮನಾಥೋಕ್ತಿಯಿಂ" ಎಂದು ಹೇಳಿರುವುದರಿಂದ, ಸೋಮನಾಥಕೃತ ಸಂಹಿತೆಯೂ ಇವನಿಗೆ ಆಧಾರವಾಗಿರಬಹುದು. ಆದರೆ ಕವಿಯು ಅಲ್ಲಲ್ಲಿ "ಅಟ್ಟನುಕ್ತಿಯಿಂ" ಎಂದು ಹೇಳಿರುವುದರಿಂದ ಸೋಮನಾಥನೆಂಬ ಹೆಸರು ಕವಿಗಿರಬಹುದೋ ಏನೋ ಎಂದು ಊಹಿಸುವುದಕ್ಕೂ ಅವಕಾಶವುಂಟು. ಒಂದೆರಡು ಕಡೆಗಳಲ್ಲಿ "ಮುನಿಮುಖ್ಯವಾಕ್ಯ" (ಏ. ೩; ದ. ೪,) "ಆದಿಯ ಮುನಿಮತಮಂ" (ಅ. ೧೭೭) ಎಂದು ಹೇಳಿರುವ ಮುನಿಯಾರು ಎಂಬುದನ್ನು ತಿಳಿಯಲು ಆಧಾರವಿಲ್ಲ. ಆದರೆ ಈತನು ಜಿನಮತದವನಾದುದರಿಂದ "ಆದಿಮುನಿ" ಎಂಬುದು ಮೊದಲನೆಯ ತೀರ್ಥಂಕರನಿಗೆ ಅನ್ವಯಿಸಬಹುದು. ಅಲ್ಲದೆ ಅಲ್ಲಲ್ಲಿ "ಸಿದ್ಧಾದೇಶಂ" (ಸ-112; ದ್ವಾ. 150) ಎಂದುಹೇಳಿರುವುದರಿಂದ ಈ ವಾಕ್ಯಕ್ಕೆ ಸಿದ್ಧರಾದ ಜೈನಗುರುಗಳು ನಿರೂಪಿಸಿದ ವಿಷಯವೆಂದೂ ಅರ್ಥವಾಗುವುದು, ಅಥವಾ ಇವನಿಗೇ ಸಿದ್ಧ ಎಂಬ ಬಿರುದಿತ್ತೆಂದಾದರೂ ಊಹಿಸಬಹುದು. ಈ ಮೇಲೆ ಹೇಳಿರುವ ಸಂಹಿತೆಗಳಲ್ಲಿ–ರತ್ನೋಜಲ ಸಂಹಿತೆ, ಧನಕೀರ್ತಿ ನವಕೀರ್ತಿ ಸಂಹಿತೆಗಳು-ಇವುಮೂರೂ ಜೈನಾಚಾರ್ಯರ ಸಂಹಿತೆಗಳಿರಬಹುದು. ವರಾಹಮಿಹಿರ, ಗಾರ್ಗ್ಯ, ಕಪಿಲ, ಪಿಂಗಳ ಸಂಹಿತೆಗಳು ವೈದಿಮತಾಚಾರ್ಯರ ಸಂಹಿತೆಗಳು. ಪ್ರಕೃತವಲ್ಲಿ ಇವೊಂದೂ ದೊರಕದಿರುವುದರಿಂದ ಅವುಗಳ ವಿಷಯವಾಗಿ ಯಾವುದೊಂದೂ ತಿಳಿದುಬರುವುದಿಲ್ಲ.

ಕವಿಯು ತನ್ನ "ಸುಕವಿನಿಧಾನ" ಮೊದಲಾದ ಬಿರುದನ್ನು ಸಾರ್ಥಗೊಳಿಸಲು ಶಾಸ್ತ್ರಗ್ರಂಥವಾದ ಈ ಗ್ರಂಥದಲ್ಲ ಕಾವ್ಯಸ್ವರೂಪವಿಶಿಷ್ಟಗಳಾದ ಒಂದೆರಡು ಅಲಂಕಾರಗಳನ್ನೂ ಪ್ರಯೋಗಿಸಿರುವನು. (ಪು. 76, 84).

ಪ್ರತಿಪಾದ್ಯ ವಿಷಯಸಂಗ್ರಹ

ಕವಿಗಳು ತಾವು ರಚಿಸಲಪೇಕ್ಷಿಸಿದ ಗ್ರಂಥವನ್ನು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳಿಸಲು ಗ್ರಂಥಾದಿಯಲ್ಲಿ ಮಂಗಳ (ಇಷ್ಟದೇವತಾಸ್ತುತಿರೂಪವಾದ) ವನ್ನು ಆಚರಿಸಬೇಕೆಂಬ ಶಿಷ್ಟಾಚಾರ ಸಂಪ್ರದಾಯವನ್ನನುಸರಿಸಿ, ಜೈನಮತೀಯನಾದ ಈ ಕವಿಯು ಜೈನಮತ ಸಂಪ್ರದಾಯದಂತೆ ಗ್ರಂಥಾದಿಯಲ್ಲಿ ಅರ್ಹತ್ಸಿದ್ಧೋಪಾಧ್ಯಾಯಾಚಾರ್ಯ ಸಾಧುಗಳನ್ನೂ, ಬಳಿಕ ಜಿನಶಾಸನ ರಕ್ಷಕರಾದ ಯಕ್ಷಯಕ್ಷಿಯರನ್ನೂ, ವಿದ್ಯಾಭಿಮಾನಿ ದೇವತೆಯಾದ ಸರಸ್ವತಿಯನ್ನೂ ಸ್ತುತಿಸಿ, ಬಳಿಕ ತನ್ನ ವಂಶಾನುಚರಿತವನ್ನೂ, ಗ್ರಂಥರಚನೆಯ ಕ್ರಮವನ್ನೂ ಹೇಳಿ, ಗ್ರಂಥವನ್ನು ತನ್ನ ಮಗಳಾದ ಚಂದ್ರಲೇಖೆಗೆ ಹೇಳಿದಂತೆ ಗ್ರಂಥವನ್ನು ಆರಂಭಿಸಿರುವನು.

ಪ್ರಥಮಾಧ್ಯಾಯದಲ್ಲಿ—ಇಳೆಯ ಸ್ಥಾವರ ಜಂಗಮಗಳು ಮಳೆಯಿಲ್ಲದೆ ಬದುಕಲಾರವು, ಮಳೆಯಿಂದ ಅದಟು, ಶ್ರೀ, ಪೆಂಪು, ಚದುರ(ತೆ), ಬಿನ್ನಣ ಮೊದಲಾದ ಸಕಲವೂ ಲಭಿಸಿ, ಪ್ರಜೆಗಳು ಸಂತೋಷದಿಂದ ಬಾಳುವರು, ಮಳೆಯಿಂದ ಧಾನ್ಯಗಳು ಬೆಳೆವುವು, ಸ್ವೇದಜ ಮೊದಲಾದನಾಲ್ಕು ಬಗೆಯ ಪ್ರಾಣಿಗಳಿಗೂ, ಮೇದಿನಿ, ಜಲ, ಅರ್ಕರಶ್ಮಿ, ಪವನ (ಭೂತಚತುಷ್ಟಯ) ಇವು ಮುಖ್ಯ. ಸೂರ್ಯನ ತಾಪದಿಂದ ಭೂಮಿಯು ಬೀಡೆಬಿಟ್ಟು ತಪಿಸುತ್ತಿರುವಾಗ ಮಳೆಯು ಸುರಿದು ಭೂಮಿಯು ಸರ್ವಧಾನ್ಯಗಳನ್ನು ಬೆಳಸುವುದು. ಹೀಗೆ ಪುರಾಣಾಚಾರ್ಯರು ಹೇಳಿದ ಮಳೆಯ ಕುರುಪನ್ನು ಎಲ್ಲರೂ (ಚಂದರಭಟ್ಟರ ದಯೆಯಿಂ) ಕಲಿಯಬೇಕು, ಮಳೆಗಾಲದಲ್ಲಿ

---

1 ಗಾರ್ಗ್ಯ (ಸ-೭೭, ೭೮), ಕಪಿಲವರಾಹಮಿಹಿರಗಾರ್ಗ್ಯ (ಅ-೧೩), ವರಾಹಮಿಹಿರಗಾರ್ಗ್ಯ (ಅ-೫೮), ವರಾಹಗಾರ್ಗ್ಯನವಕೀರ್ತಿಯ (ನ-೭), ಗಾರ್ಗ್ಯವರಾಹ ಮುನೀಂದ್ರ (ದ್ವಾ-೬೮, ೭೪), ವರ ಪಿಂಗಳ ಗಾರ್ಗ್ಯಭಾಷಿತಂ(ದ್ವಾ-೮೧), ಎಂದರ್ ಗಾರ್ಗ್ಯರ್ (ದ್ವಾ-೯೩), ನುತವರಾಹ ಮತದೆ (ದ್ವಾ-೧೫೩).

ಮಳೆಯುಸುರಿದು ತಂಪನ್ನುಂಟು ಮಾಡಿ ಧಾನ್ಯಗಳನ್ನು ಬೆಳಸುವುದು, ಇಷ್ಟು ಮುಖ್ಯವಾದ ಮಳೆಯನ್ನು ಮೊದಲು ಶಕುನಗಳಿಂದ ತಿಳಿಯಬೇಕು ಎಂದು ಹೇಳಿ, ಪರಿವೇಷ ಮೊದಲಾದ ದಶ ವಿಧಧಾತುಗಳು ಮಳೆಯ ಉತ್ಪತ್ತಿಯನ್ನು ಹೇಳುವುದರಿಂದ ನೈಮಿತ್ತಿಕನು (ಜೋಯಿಸನು) ಈ ಹತ್ತು ಧಾತುಗಳು ಸ್ವರೂಪವನ್ನು ತಿಳಿಯುವುದಕ್ಕೆ ಮೊತ್ತ ಮೊದಲು ಮಳೆಯ ವಿಷಯವನ್ನು ಕೇಳಲು ಬಂದ ದೂತನ ಲಕ್ಷಣದಿಂದ ಮಳೆಯು ಹುಯ್ಯುವುದು-ಹುಯ್ಯುವುದಿಲ್ಲ ಎಂಬ ವಿಷಯವನ್ನು ತಿಳಿಯಬೇಕೆಂದು ದೂತಲಕ್ಷಣವನ್ನು ವಿಶದವಾಗಿ ವಿವರಿಸಿಹೇಳಿ, ಪ್ರಥಮಾಧ್ಯಾಯ ವನ್ನು ಉಪಸಂಹರಿಸಿರುವನು.

ದ್ವಿತೀಯಾಧ್ಯಾಯದಲ್ಲಿ (ಆಕಸ್ಮಿಕ ಶಕುನಾಧ್ಯಾಯ)—ಮಸೆದ ಕೆಯ್ದು, ಶುನಕನೂ ಊಳ್ವುದು, ಲವಣ ಬೆಲ್ಲಗಳ ಭಾಂಡಗಳೊಡೆವುದು, ಕಸದಲ್ಲಿ ತಗಣೆ, ಜೀವದನಂಗಳಂ ನೊಣ ಕಡಿವುದು, ಬಳ್ಳಿಗಳ ಕುಡಿ ಮೇಲೆ ನೆಗೆವುದು, ಕುಳಿಗಳಲ್ಲಿ ನೀರೊಳೆವುದು, ಪಕ್ಷಿಜಾತಿ ಪುಡಿಯಲ್ಲಿ ಪೊರಳ್ವುದು, ನೀರ್ಗದಿರ ಮಸೆಕ, ಉಳ್ಕಾಪತನ, ಪಶ್ಚಿಮದಲ್ಲಿ ಕೊರಡು ಮೂಡುವುದು, ಸುಟ್ಟುಳಿಗಾಳಿ, ಕೊಡತಿವುಳುಗಳಾಟ, ವಾಯಸದ ತತ್ತಿ, ಮಹಾಮೇಘೋದಯ, ನರರಿಗೆ ಬಹುಮೂತ್ರ, ನವಿಲ ಕೇಗು, ಸಂಜೆಯಲ್ಲಿ ಮಂಜು, ಹಾವು ಮರನೇರುವುದು, ಮೀನು ನೀರದಡಕ್ಕೆ ಬರುವುದು, ಮುಂಬಗಲಲ್ಲಿ ಪೂರ್ವದಿಶೆಯಲ್ಲಿ ಕಾಮನಬಿಲ್ಲು, ನೀರಿನ ರುಚಿ ಕೆಡುವುದು, ಮೇಘಗಳ ಬಣ್ಣ ಮತ್ತು ಹುಟ್ಟುವ ದಿಕ್ಕುಗಳು, ಮತ್ತು ಸಂಚರಿಸುವ ಗತಿ, ಹತ್ತು ಧಾತುಗಳು ತೋರುವುದು, ಮೃಗಪಕ್ಷಿಗಳು ಊರಹತ್ತಿರ ಕೂಗುವ ಧ್ವನಿವಿಕಾರ, ಬೆಕ್ಕು, ಮೊಲ, ಪುಲಿ, ಎಕ್ಕಲ(ಮುಳ್ಳುಹಂದಿ) ಎರಳೆ, ನರಿ, ಭುಜಂಗಮ, ಇಲಿ, ಕೊಂಕ(ಕ್ಕ) ಓತಿ, ಗೋರಿವೆರಸಿದ ಸಾರಂಗ, ಮತ್ತು ಅನೇಕ ಮೃಗಜಾತಿಗಳು ನಲಿವುದು. ಇರುವೆ ಮೊಟ್ಟೆಗಳಂ ದೇವಸ್ಥಾನಕ್ಕೆ ಒಯ್ಯುವಿಕೆ, ಇವನ್ನು ನೋಡಿ ಮಳೆಯಸ್ವರೂಪವನ್ನು ಹೇಳುವ ಕ್ರಮವನ್ನು ಹೇಳಿ ದೂತನು ಮಳೆಯು ಹೇಗೆಂದು ಜೋಯಿಸನನ್ನು ಕೇಳಿದಾಗ, ನೀರಹಕ್ಕಿಗಳು, ಕಪ್ಪೆ, ಆನೆ ಇವು ನೀರನ್ನು ಎರಚುವುದು, ಮಂಗಳವಾದ್ಯಗಳ ಬಾಜನೆ-ಇವುಗಳಿಂದ ಸದ್ಯದಲ್ಲಿ ಮಳೆ ಹೊಯ್ಯುವುದು ಎಂಬು ದನ್ನು ಹೇಳಿ ಅಧ್ಯಾಯವನ್ನುಪಸಂಹರಿಸಿರುವನು.

ತೃತೀಯಾಧ್ಯಾಯದಲ್ಲಿ (ಶಕುನತ್ರಯಾಧ್ಯಾಯ)—ಮಳೆಯಶಕುನ ನೋಡತಕ್ಕವನು ಪಿಂಗಲಿಹಕ್ಕಿ, ಪೋದಗೆ ಹಕ್ಕಿ, ನಾಯಿ (ಮಂಡಲಿ) ಇವನ್ನು ಪೂಜಿಸಿ, ಸ್ವಲ್ಪ ದೂರದಲ್ಲಿ ನಿಂತು ಅವುಗಳ(ಆಪಕ್ಷಿ ಮೃಗಗಳ)ಸ್ಥಿತಿಗತಿಗಳನ್ನು ನಿರೀಕ್ಷಿಸುತ್ತಿರಬೇಕು ಎಂದು ಹೇಳಿ, ಪಿಂಗಲಿ ಹಕ್ಕಿಯ, ಪೋದಗೆ ಹಕ್ಕಿಯ, ನಾಯ ಧ್ವನಿವಿಕಾರ ಮತ್ತು ಚೇಷ್ಟೆ ಇವುಗಳಿಂದ ಮಳೆಯ ಸ್ವರೂಪವನ್ನು ತಿಳಿವ ಕ್ರಮವನ್ನು ಹೇಳಿ, ಅಧ್ಯಾಯವನ್ನುಪಸಂಹರಿಸಿರುವನು.

ಚತುರ್ಥಾಧ್ಯಾಯದಲ್ಲಿ (ಸಸ್ಯೋತ್ಪತ್ತಿ ನಿಮಿತ್ತಾದ್ಯಧ್ಯಾಯ)—ಒಂದು ಪಲ ನೂಲು, ಒಂದು ಮೊಳ ಬಟ್ಟೆ ಇವುಗಳಿಂದ ಬಾವುಟಮಾಡಿ ನೆಟ್ಟು (ವಾಯುಚಕ್ರ), ಅದರ ಸಹಾಯದಿಂದ ಯಾವ ಯಾವ ತಿಂಗಳಲ್ಲಿ ಯಾವ ಯಾವ ದಿಕ್ಕಿನಿಂದ ಗಾಳಿ ಬೀಸಿದರೆ ಮಳೆ ಬರುವುದು-ಬಾರದಿರುವುದು ಇವನ್ನು ತಿಳಿವ ಕ್ರಮವನ್ನು ಹೇಳಿ, ಬಳಿಕ ಮಳೆಯ ಸ್ವರೂಪವನ್ನು ತಿಳಿಯ ಬೇಕೆಂದಿರುವವನು ಮಳೆಗಾಲವಾದ ಆಷಾಢಮಾಸದ ಪೂರ್ಣಿಮೆ ಕಳೆದು ಬರುವ ನವಮಿ ದಿವಸ ಊರಬಾಗಿಲಲ್ಲಿ ನಿಂತು ಊರೊಳಕ್ಕೆ ಬರುವ ಪಶುಗಳನ್ನು ಅರ್ಚಿಸಿ ನಿರೀಕ್ಷಿಸುವಾಗ ಮೊತ್ತ ಮೊದಲು ಊರೊಳಕ್ಕೆ ಪ್ರವೇಶಿಸುವ ಗೋವುಗಳ ಲಕ್ಷಣದಿಂದ ಮಳೆಯ ಸ್ವರೂಪವನ್ನು ತಿಳಿವ

ಕ್ರಮವನ್ನು ಹೇಳಿ, ಮತ್ತೆ ಅರುಣಾಶೋಕಶೋಭೆ (ಚಿಗುರುವಿಕೆ) ಆಲ, ಸಿರಿಸ (ಬಾಗೆ), ಇಪ್ಪೆ, ನೇಱಿಲ್, ಗೇರು, ಕಱಂಕು, ಕರ್ಮರ, ಅದಮ ? ಅರಳಿ, ಇಂಗುದಿ(ಇಂಗಳ), ಅದಿಮುರ್ತೆ,(ಹೂಬಳ್ಳಿ), ಏಟಿಲೆವಾಟಿ(ಹೂಗಿಡ), ಬಯ್ಸಿ, ಗೊರವಿ(ಪಂಜಿನ ಮರ),ಕೃಷ್ಣಾರುಣಾಶೋಕೆ, ಹಾಲೆ, ಮುತ್ತ, ಮೊಲ್ಲೆ, ನಂದ್ಯಾವರ್ತ, ಸಿಂಧುರ, ತಿಲಕ, ಎಕ್ಕೆ, ಗೋರ, ಇಟ್ಟೆ(ಇಂಗಳ), ಬಸರಿ, ಬಾಳೆ, ಹಸ್ತಿಕರ್ಣಿ (ಹಸ್ತಿಪರ್ಣಿ ?), ಪಾದರಿ, ಅರುಣೋತ್ಪಲ, ಬಿಸರುಹ(ಕಮಲ), ನೈದಿಲೆ, ಕುವಳಯ, ಅವರೆ, ಕುಸುಂಬೆ, ಚೂತವೃಕ್ಷ(ಮಾವು), ಕೊಡಸಿಗೆ (ಗಿರಿಮಲ್ಲಿಗೆ), ಕಡುವು (ಕದಂಬ), ಬನ್ನಿ, ತಱ, ಗೇರಮರ, ನಾಗಕೇಸರ, ಬೀಡಿಮರ, ಬೆಳಲು (ಬೇಲದ ಗಿಡ), ಈ ಮರಗಳು ಹೆಚ್ಚಾಗಿ ಚಿಗುರಿ ಹೂಕಾಯಿಗಳು ಬಿಟ್ಟರೆ, ಕ್ರಮವಾಗಿ ಕಟಿವೆ (ಭತ್ತ), ಸಜ್ಜೆ, ಹೆಸರು, ಗೋದುವೆ, ಎಳ್ಳು, ಉದ್ದು, ತೊಗರಿ, (ಕರ್ವು ?), ವ್ರೀಹಿ (ಭತ್ತ), ಜೋಳ, ಸಕಲಧಾನ್ಯ, ಸಣಂಬು, ಪಟ್ಟಿ, ಗುರುಗುಂಜಿ, ಅಗಸೆ (ನೀಲಿಗಿಡ), ಹೊಂಬೆಸಱು (ಅಲಸಂದೆ ?), ಗಂಧಶಾಲಿ (ಪುನುಗು ರಾಜಭತ್ತ), ಜೋಳ, ನವಣೆ, ಸಾಸಿವೆ ಮೊದಲಾದ ಧಾನ್ಯಗಳೂ, ವೈಡೂರ್ಯ, ಮುತ್ತು, ಬೆಳ್ಳಿ, ಚಿನ್ನ, ಹವಳ, ವಜ್ರ, ಕಂದು(ಚು ?)(ಒಂದು ಲೋಹವಿರಬಹುದು), ಮುಂತಾದ ಚಿನ್ನಬೆಳ್ಳಿರತ್ನಗಳೂ, ಕುದುರೆ, ಕುಱಿ ಆನೆ, ಆಕಳಹಿಂಡು ಮೊದಲಾದ ವಾಹನ ಪಶುಗಳೂ ರಾಜ ಮತ್ತು(ಮಂತ್ರಿ), ಬ್ರಾಹ್ಮಣ, ವೈಶ್ಯ, ತೆಲ್ಲಿಗ(ಗಾಣಿಗ), ಕಾರುಕರು(ಬಡಗಿ ಮೊದಲಾದ ೫ಬಗೆಯ ಕೆಲಸಗಾರರ)ಇವರ ಏಳಿಗೆಯೂ, ಜಗಕ್ಕೆ ಸುಖ, ರೋಗನಾಶ, ಮಳೆ ಬರದಿರುವಿಕೆ, ಬರ ಬರುವಿಕೆ, ಭೀತಿ ಇವೇ ಮೊದಲಾದ ಸುಖ ದುಃಖಗಳೂ, ಜೇನು, ಸುಭಿಕ್ಷ, ಅಗ್ನಿಭಯ ಇವೆಲ್ಲವೂ ಉಂಟಾಗುವುವು–ಎಂದು ಹೇಳಿ, ಮತ್ತೆ ಮುತ್ತುಗದ ಕಾಯನ್ನು ಸುಲಿದ ಲಕ್ಷಣದಿಂದ ಹಿಂಗಾರು-ಮುಂಗಾರು ಬೆಳೆಯಾಗುವುದನ್ನು ತಿಳಿಸಿ, ಕಾಡಿನಲ್ಲಿ ಮಾವು, ಬೇವು,ಹುಣಿಸೆ, ಎಕ್ಕೆ ಇವುಗಳ ಅತಿಶಯ ಫಲದಿಂದ,ನವಣೆ, ಎಳ್ಳು, ನೆಲ್ಲು ಯಾವ ಬೆಳೆಯೂ ಆಗದಿರುವುದು–ಇವನ್ನು ಹೇಳಿ, ಈ ಬಗೆಯಲ್ಲಿ ಮರಗಳ, ಫಲಪುಷ್ಪಾದಿಗಳ ನ್ಯೂನತಾಧಿಕ್ಯಗಳಿಂದ ಮಳೆ ಬೆಳೆಗಳಾಗುವುದು–ಆಗದಿರುವುದು–ಇವನ್ನು ಸೂಚಿಸಿ, ಮಳೆಯ ನಯವನ್ನು ಚಂದ್ರನ ಬೆಳಕಿನಲ್ಲಿ ಮೂಱು ಮೊಳ ನೂಲನ್ನಿಟ್ಟು, ಆ ನೆಳಲ ದಿಕ್ಕಿನಿಂದ ಹೆಚ್ಚು ಮಳೆ, ಮಧ್ಯಮ ಮಳೆ, ಮಳೆಯ ಅಭಾವವನ್ನು ಸೂಚಿಸಿ, ಕೊರಡಿನ ಉದಯ, ನೀರ್ಗದಿರುದಯ, ಬೀಸಿದ ಗಾಳಿ, ಸೂರ್ಯಕಾಂತಿಯ ಕುಂದು, ಕಾಗೆಯಂತೆ ಕಪ್ಪು ಮೇಘಗಳ ಉದಯ, ನಿರುತಿಯ ಗಾಳಿ, ಸೂರ್ಯಬಿಂಬ ಹೆಚ್ಚು ಕಾಂತಿಯುಳ್ಳುದು, ವಾಯುವ್ಯದ ಗಾಳಿ, ಮೇಘ ಕಾಂತಿ ನಿರ್ಮಳವಾಗಿರುವುದು – ಇವುಗಳಿಂದ ಮಳೆಯಿಲ್ಲ ಬಱನುಂಟಾಗುವುದೆಂದು ಹೇಳಿ, ಅಧ್ಯಾಯವನ್ನು ಪಸಂಹರಿಸಿರುವನು.

ಪಂಚಮಾಧ್ಯಾಯದಲ್ಲಿ (ತ್ರಿವಿಧೋತ್ಪಾತಫಲಾಧ್ಯಾಯ) ಉತ್ಪಾತ (ವಿಕಾರ) ಗಳನ್ನು ಭೌಮ (ಭೂಮಿಗೆ ಸಂಬಂಧಿಸಿದುದು) ಅಂತರಿಕ್ಷ (ಆಕಾಶದಲ್ಲಾಗುವುದು), ದಿವ್ಯ (ಗ್ರಹವಿಕಾರದಿಂದಾದುದು) ಎಂದು ಮೂರುಬಗೆಯಾಗಿ ವಿಗಂಡಿಸಿ ಭೌಮೋತ್ಪಾತವೆನಿಸಿದ ಬಿಳಿಯಕಾಗೆ, ರಾತ್ರಿಯಲ್ಲಿ ಕಾಮನಬಿಲ್ಲು ಮೂಡುವುದು,(ಇದು ಅಂತರಿಕ್ಷ) ಕಪ್ಪೆಗೆ ಚೆಂಡಿಕೆ ಹುಟ್ಟುವುದು, ಇವುಗಳಿಂದ ಮಳೆಯಿಲ್ಲ. ಡಾವರ(ರಾಜರಿಂದ ಸೂರೆ)ವುಂಟಾಗುವುದು ಮತ್ತು ಸ್ಥಾವರಜಂಗಮಾತ್ಮಕ ವಸ್ತುಗಳ ಸ್ವಭಾವಗುಣಗಳಲ್ಲಿ ಸಾಮಾನ್ಯವಾಗಿ ಮಾರ್ಪಾಡಾದರೆ ಲೋಕದಲ್ಲಿ ಸಾವುಕೇಡುಗಳೂ ಹಲವುತೆಱದ ಪರಿಭವಗಳೂ ಉಂಟಾಗುವುವು. ಇಂತರಿಕ್ಷೋತ್ಪಾತವೆನಿಸಿದ, ರಾತ್ರಿಯಲ್ಲಿ ಮೂಡಿದ ಇಂದ್ರಚಾಪ (ಪೂರ್ವದಿಕ್ಕಿನಲ್ಲಿ ಹುಟ್ಟಿದುದು), ಧೂಮಕೇತು, ಬಾಲದಮೀನು ಇವುಗಳಿಂದ ರಾಜರಿಗೂ ಮತ್ತು ಮಂತ್ರಿ ಮೊದಲಾದ ಅವರ ಸಪ್ತಾಂಗಕ್ಕೂ ಕೇಡಾಗುವುದು. ಅಕಾಲ

ವೃಷ್ಟಿ ಏಳುದಿನ ಕರೆದರೆ ರಕ್ತದಂತೆ, ಕೆಂಪಾದ ನೀರು ಸುರಿದರೆ ಭೂಮಿಯಲ್ಲಿ ರಕ್ತದ ಹೊಳೆ ಹರಿದರೆ, ಇರುಳ ಇಂದ್ರಚಾಪವು ವಾಯ್ವಗ್ನಿಮಂಡಲಗಳಲ್ಲಿ ತೋರಿದರೆ ಪ್ರಜಾರಾಜರಿಗೆ ಕೇಡಾಗುವುದು. ಇಂದ್ರಚಾಪದ ಅರವೊಱಸಿನ ಬಣ್ಣ, ಬಿಳಿಯಬಣ್ಣ ಇವುಗಳಿಂದ ಪ್ರಜೆಗಳು ಸಾವರು. ಆಲಿಕಲ್ಲು ಬಿರುಗಾಳಿ ಸಿಡಿಲು ಕೆಂಪುವರ್ಣದ ಮಳೆಹನಿಗಳಾದರೆ ದುರ್ಭಿಕ್ಷವಾಗುವುದು. ಮೞೆ ಬೀಳದಿರುವಾಗ ತೊಟ್ಟನೆ ಸಿಡಿಲುಬಿದ್ದರೆ ಒಳ್ಳೆಯಮಳೆ ಬೀಳುವುದು ಎಂದು ಹೇಳಿ ಬಳಿಕ ದಿವ್ಯೋತ್ಪಾತವೆನಿಸಿದ ಪರಿವೇಷದ ವೈವಿಧ್ಯ ದಿಂದ ವಿವಿಧಫಲಗಳನ್ನು ಹೇಳಿ ಮತ್ತೆ ಇಂದ್ರಧನುಸ್ಸಿನ ಬಣ್ಣ ಸ್ವರೂಪವನ್ನು ಹೇಳಿ ಮಿಂಚಿನ ಮಿಂಚುವಿಕೆಯ ವಿಶೇಷದ ಫಲವನ್ನು ಹೇಳಿ ಅಧ್ಯಾಯವನ್ನು ಉಪಸಂಹರಿಸಿರುವನು.

ಷಷ್ಠಾಧ್ಯಾಯದಲ್ಲಿ (ಮೇಘಪ್ರಥಮ ಗರ್ಭಲಕ್ಷಣ)ಮೇಘವು ಪ್ರಥಮಗರ್ಭಕಟ್ಟಿದಂದಿನ ದಿನವಿಶೇಷದಿಂದಾಗುವ ಫಲ, ಮಳೆಯ ಪ್ರಮಾಣವೆನಿಸಿದ ದ್ರೋಣದ ಲಕ್ಷಣ, ಮಿಂಚಿನ ಲಕ್ಷಣ, ಪ್ರತಿಸೂರ್ಯನ ಲಕ್ಷಣ, ಪರಿವೇಷ ಮೊದಲಾದಂಥ ದಶಧಾತುಗಳು ಚೈತ್ರಾದಿ ಹನ್ನೆರಡು ತಿಂಗಳ ಅಮಾವಾಸ್ಯೆಯಲ್ಲಿ ಉಂಟಾದುದರ ಫಲ, ಹಾಗೆಯೇ ಚೈತ್ರಾದಿ ದ್ವಾದಶ ಮಾಸಗಳಲ್ಲಿ ಉಂಟಾದುದರ ಫಲ, ಸೂರ್ಯ ಮೊದಲಾದ ಗ್ರಹಗಳು ವರ್ಷಾಧಿಪತಿಗಳಾದುದರ ಫಲ, ಸೂರ್ಯನ ಮಾನದಿಂದ ವರ್ಷದಿನಗಳ ಪ್ರಮಾಣಭೇದ, ಇವನ್ನು ಹೇಳಿ ಸೂರ್ಯಾದಿಗ್ರಹಗಳು ರಾಶಿರಾಶಿಗಳಲ್ಲಿರುವ ಫಲ, ವರ್ಷಾಧಿಪನಾರೆಂದು ತಿಳಿವ ಕ್ರಮ, ಇವನ್ನು ಹೇಳಿ ಅಧ್ಯಾಯವನ್ನು ಉಪಸಂಹರಿಸಿರುವನು.

ಸಪ್ತಮಾಧ್ಯಾಯದಲ್ಲಿ (ಜ್ಯೌತಿಷಾಧ್ಯಾಯ), ಪ್ರಭವಾದಿ ೬೦ ವರ್ಷಗಳನ್ನೂ ಐದೈದು ವರ್ಷಗಳಿಗೊಂದೊಂದು ಯುಗವೆಂದು ವಿಭಾಗಿಸಿ ಬಂದ ಹನ್ನೆರಡು ಯುಗಗಳ ಪ್ರತಿಸಾವತ್ಸರದ ಫಲವನ್ನು ಹೇಳಿ, ಗ್ರಹಗಳ ಶತ್ರುಮಿತ್ರತ್ವ, ಹನ್ನೆರಡುರಾಶಿಗಳಲ್ಲಿ ಪ್ರತಿಯೊಂದು ರಾಶಿಯ ಮಿಘಳಿಗೆಯ ಪ್ರಮಾಣ, ಭಾರತಭೂಮಿಯ ವಿಭಾಗದಲ್ಲಿ ಯಾವಯಾವಭಾಗಕ್ಕೆ ಯಾವಯಾವ ಗ್ರಹಗಳು ಅಧಿಪತಿಗಳು ಎಂಬಿವನ್ನು ಹೇಳಿ, ಒಂದು ರಾಶಿಯಲ್ಲಿ ಪರಸ್ಪರವಾಗಿ ಸೇರಿಕೊಂಡಿರುವ ಗ್ರಹಗಳ ಫಲ, ಕೆಲವು ವರ್ಷಗಳಲ್ಲಿ ಆದ ಗ್ರಹಸಂಯೋಗ ಫಲ, ಗ್ರಹಗಳ ಯುದ್ಧಸ್ವರೂಪ ಆವುಗಳ ಫಲ, ಕುಜ, ಬುಧ, ಗುರು, ಶುಕ್ರ, ಶನಿ ಈ ಆಯ್ದು ಗ್ರಹಗಳ ಉದಯಾಸ್ತಗಳಿಂದ ದೊರಕುವ ಫಲ, ಗ್ರಹವೇಧೆ ಗೋಚಾರಗಳಿಂದಾಗುವ ಫಲ, ಗ್ರಹವಕ್ರದಿಂದಾಗುವ ಫಲ, ಗ್ರಹವೇಧಫಲ, ಬುಧನ ಉದಯದವಿಶೇಷಫಲ, ಶುಕ್ರನಾಱುವೀಧಿಯ ಸಂಚಾರವಿಶೇಷಫಲ ಇವುಗಳನ್ನು ಹೇಳಿ ಅಧ್ಯಾಯವನ್ನುಪಸಂಹರಿಸಿರುವನು.

ಅಷ್ಟಮಾಧ್ಯಾಯದಲ್ಲಿ (ಮುಗಿಲ್ಗಳ ನಾಮಾಧ್ಯಾಯ)ಮೞೆಸುರಿಸುವ ಮೇಘಗಳ ಹೆಸರು ಮೇಘಗಳಲ್ಲಿ ಬ್ರಾಹ್ಮಣ ಮೊದಲಾದ ಚಾತುರ್ವರ್ಣ್ಯದ ವಿಭಾಗ, ಅವು ಆಳುವ ದೇಶ, ಅವುಗಳ ಆಕಾರ ವರ್ಣವಿಶೇಷಗಳ ಫಲ, ದಶಧಾತುಗಳ ಹೆಸರು, (ಇವುಗಳು ತೋಱದಿದ್ದರೆ ಮಳೆಯಾಗುವುದು,) ದುರಿತಗ್ರಹ, ಉತ್ಪಾತ ಇವುಗಳ ಬಲಾಬಲಗಳನ್ನು ತಿಳಿದು, ಮೞೆಯ ಫಲವನ್ನು ಹೇಳಬೇಕು, ಎಂದು ಹೇಳಿ ಆಯಾ ನಕ್ಷತ್ರಗಳಲ್ಲುದಯಿಸಿದ ಮಳೆಗಳ ಪ್ರಮಾಣವೆನಿಸಿದ ದ್ರೋಣಗಳ ಲೆಕ್ಕ, ಮೇಘಗಳ ಪ್ರಥಮಗರ್ಭಾಧಾನಲಕ್ಷಣದಿಂದ ಸುರಿವ ಮೞೆಯ ಫಲ, ಮೞೆ ಬೀಳುವುದಕ್ಕೆ ತಕ್ಕ ನಿಮಿತ್ತ, ಮಾರ್ಗಶಿರದಿಂದಾರಂಭಿಸಿ ಪ್ರತಿತಿಂಗಳ ಸ್ವರೂಪದಿಂದ ಬೀೞುವ ಮೞೆಗಳ ಫಲ,(ಕಾರ್ತಿಕ ತಿಂಗಳ ಫಲವು, ಲೇಖಕ ಪ್ರಮಾದದಿಂದ ಹಸ್ತಲಿಖಿತಪ್ರತಿಗಳಲ್ಲೆಲ್ಲೂ

ಗಳಿತವಾಗಿದೆ) ಜ್ಯೇಷ್ಠಮಾಸದ ಫಲದಲ್ಲಿ ಸೂರ್ಯನ ವೃಷಭ ಪ್ರವೇಶದ ಫಲ, ಮೃಗಶಿರಾದಿ ಮೂರುನಕ್ಷತ್ರಗಳಲ್ಲಿ ಸೂರ್ಯನು ಸಂಚರಿಸುವುದರಿಂದಾಗುವ ಮಳೆಯ ಫಲ ಇವನ್ನು ಹೇಳಿ, ಆಷಾಢಮಾಸ ಫಲದಲ್ಲಿ, ಆಷಾಢ್ಯರೋಹಿಣೀ ಫಲ, ಚಿತ್ರಾದಿಯೋಗಫಲ ಇವನ್ನು ಹೇಳಿ ಆಶ್ವಯುಜಮಾಸದ ಫಲವನ್ನು ಮುಗಿಸಿದ ಬಳಿಕ ರವಿಯ ವೃಶ್ಚಿಕಪ್ರವೇಶದಿಂದಾಗುವ ಮಳೆಯ ಫಲಗಳನ್ನು ಹೇಳಿ ಅಧ್ಯಾಯವನ್ನುಪಸಂಹರಿಸುವನು.

ನವಮಾಧ್ಯಾಯದಲ್ಲಿ (ಬೀಜಾವಾಪಸಂಧಾನಾಧ್ಯಾಯದಲ್ಲಿ) ಬೀಜಬಿತ್ತುವ ಕ್ರಮವನ್ನು ಹೇಳುವುದಕ್ಕಾರಂಭಿಸಿ, ಸೂರ್ಯಶೂಲ ಎಂದರೆ ಸೂರ್ಯನನ್ನು ಶೂಲಾಕಾರದಲ್ಲಿ ಭಾವಿಸಿ ಅಕ್ಕಪಕ್ಕ, ನಡು ತುದಿ(ಮೊನೆ) ಎಂಬ ಭಾಗಗಳಲ್ಲಿರುವ ನಕ್ಷತ್ರಗಳಲ್ಲಿ ಬಿತ್ತುವುದರಫಲ, ರಾಹುಚಕ್ರದನಕ್ಷತ್ರ ವಿಭಾಗಕ್ರಮವನ್ನು ಹೇಳಿ,ಎಂದರೆ ಹಾವಿನ ಆಕಾರದ–ಮುಖ,ತಲೆ,ಕತ್ತು(ಕಂಧರ)ಹೊಟ್ಟೆ(ಉದರ) ಬಾಲ ಈ ಅಂಗವಿಭಾಗಗಳಲ್ಲಿ ಮೂರು ಮೂರು ನಕ್ಷತ್ರಗಳನ್ನೂ ಸುತ್ತಿನ ಭಾಗದ ಹಳ್ಳದ ಹೊರಗಡೆ ಆರು ನಕ್ಷತ್ರಗಳನ್ನೂ ವಿಭಾಗಿಸಿ ಈ ಭಾಗಗಳಲ್ಲಿರುವ ನಕ್ಷತ್ರಗಳಲ್ಲಿ ಬೀಜ ಬಿತ್ತುವುದರ ಫಲವನ್ನು ಹೇಳಿ, ಬೀಜವನ್ನು ಬಿತ್ತುವ ಶುಭನಕ್ಷತ್ರಗಳು, ಯಾವಯಾವ ನಕ್ಷತ್ರಗಳಲ್ಲಿ ಯಾವಯಾವ ಧಾನ್ಯಗಳನ್ನು ಬಿತ್ತಿದರೆ ಉತ್ತಮ, ಯಾವಯಾವ ಗ್ರಹನಕ್ಷತ್ರಗಳ ಯೋಗದಲ್ಲಿ ಬೀಜಬಿತ್ತಿದರೆ ಕೇಡು, ಎಂಬುದನ್ನು ವಿವರಿಸಿ, ಬೀಜವನ್ನು ಬಿತ್ತುವ ಸಾಧನವಾದ ಕೂರಿಗೆಯನ್ನು ಪೂಜಿಸುವ ವಿಧಾನ, ಬೀಜಬಿತ್ತಲು ಹೊರಟಾಗ ಉಂಟಾಗುವ ಕೆಟ್ಟ ಮತ್ತು ಒಳ್ಳೆಯ ಶಕುನಗಳು ಇವನ್ನು ಹೇಳಿ ಯಾವಯಾವ ಬೀಜಗಳನ್ನು ಯಾವಯಾವ ನಕ್ಷತ್ರಗಳಲ್ಲಿ ಬಿತ್ತಬೇಕೆಂಬ ಕ್ರಮವನ್ನು ವಿವರಿಸಿ ಅಧ್ಯಾಯವನ್ನು ಉಪಸಂಹರಿಸಿರುವನು.

ದಶಮಾಧ್ಯಾಯದಲ್ಲಿ, (ಗ್ರಹಣಾಧ್ಯಾಯ) ೨೮ ನಕ್ಷತ್ರಗಳನ್ನೂ ಏಳೇಳಕ್ಕೆ ಒಂದೊಂದು ಮಂಡಲದಂತೆ ಮಾರುತ (ವಾಯು), ಪಾವಕ (ಅಗ್ನಿ) ವರುಣ, ಕುಳಿಕ (ಕುಲಿಶಿ–ಇಂದ್ರ ಎಂದಿರಬೇಕು) ಎಂಬ ನಾಲ್ಕು ಮಂಡಲಗಳಾಗಿ ವಿಭಾಗಿಸಿ ಆ ಮಂಡಲಗಳಲ್ಲಿ ತೋರುವ ಗ್ರಹಣಗಳಿಂದಾಗುವ ಶುಭಾಶುಭ ಫಲಗಳನ್ನು ಹೇಳಿ ಅಧ್ಯಾಯವನ್ನುಪಸಂಹರಿಸಿರುವನು.

ಏಕಾದಶಾಧ್ಯಾಯದಲ್ಲಿ, [1](ಉದಕಾರ್ಗಳ) ಹೀಗೆ ಮಳೆಯ ನೀರು ಬೀಳುವಕ್ರಮವನ್ನು ತಿಳಿಯುವಂತೆ ಹೇಳಿ ಇನ್ನು ಭೂಮಿಯಲ್ಲಿ ಭಾವಿ ತೋಡಿದರೆ ನೀರು ಬರುವುದು, ಬರದಿರುವುದು, ನೀರುಬರುವ ಪ್ರಮಾಣ ಇವುಗಳನ್ನು ಹೇಳಿರುವನು. ಹುತ್ತು ಮರಗಳ ವಿಶೇಷ, ಹುಲ್ಲು ಹಸಲೆ, ಅವುಗಳ ವಿಶೇಷ ಇವುಗಳಿಂದ ಅರ್ಧಾಳುದ್ದ ಮೊದಲು ಅಯ್ವಾಳುದ್ದದ ಪ್ರಮಾಣದಲ್ಲಿ ನೀರಿನ ಧಾರೆ ಹುಟ್ಟುವಕ್ರಮವನ್ನು ಹೇಳಿ, ಭಾವಿ ತೋಡುವಾಗ ಸಿಕ್ಕುವ ಕಲ್ಲುಬಂಡೆಗಳನ್ನು ಮಿದುಮಾಡಿ ಒಡೆದು ತೆಗೆಯುವ ಕ್ರಮ, ಕಲ್ಲನ್ನು ಒಡೆವ ಉಳಿ, ಹಾರೆ ಇವುಗಳ ಬಾಯನ್ನು ವಜ್ರದಂತೆ ಗಟ್ಟಿಮಾಡಲು ನೀರೂಡುವ ಕ್ರಮ, ಇವನ್ನು ಹೇಳಿ, ತೋಡಿದ ಭಾವಿಯನ್ನು ಉತ್ತಮವಾದ ರೀತಿಯಲ್ಲಿ ಎಂದರೆ ಅದರ ನೀರು ಕೆಡದಂತೆ ಇರಲು ಮಾಡಬೇಕಾದ ಕ್ರಮ, ಭಾವಿಯ ನೀರನ್ನು ಸಿಹಿ ಮಾಡುವ ಕ್ರಮ, ಭಾವಿಯನ್ನು ತೋಡುವ ದಿಕ್ಕಿನ ಫಲ, ಭಾವಿಯನ್ನು ತೋಡಿದಾಗ ಮೊದಲು ನೀರಿನ ಧಾರೆತೋರಿದಾಗ ಮಾಡಬೇಕಾದ ಪೂಜಾಕ್ರಮ ಇವನ್ನು ಹೇಳಿ ಅಧ್ಯಾಯವನ್ನುಪಸಂಹರಿಸಿರುವನು.

---

1 ಈ ಉದಕಾರ್ಗಳದಲ್ಲಿರುವ ವಿಷಯಗಳು "ಲೋಕೋಪಕಾರ" ಗ್ರಂಥದಲ್ಲಿಯೂ ಹೇಳಿದೆ. ಇವೆರಡಕ್ಕೂ ಹಲವು ವ್ಯತ್ಯಾಸಗಳಿವೆ.

ದ್ವಾದಶಾಧ್ಯಾಯದಲ್ಲಿ, (ಗ್ರಹನಕ್ಷತ್ರಗಳ ಸ್ವರೂಪಾಧ್ಯಾಯ) ಹಿಂದೆ (ಹತ್ತರಲ್ಲಿ) ಹೇಳಿರುವ ಮಾರುತಾದಿ ನಾಲ್ಕು ನಕ್ಷತ್ರಮಂಡಲ, (ಇವುಗಳಲ್ಲಿ ಮೂರುಮಾತ್ರ ಇದೆ. ನಾಲ್ಕನೆಯದು ಬಿಟ್ಟುಹೋಗಿದೆ)ಉಚ್ಚನೀಚರಾಶಿಗಳು ಇವನ್ನು ಆರಂಭದಲ್ಲಿ ಹೇಳಿದಬಳಿಕ ಅರ್ಘಖಂಡ (ಧಾನ್ಯಗಳಬೆಲೆಗಳ ಸ್ಥಿತಿ)ವೆಂಬ ಭಾಗದಲ್ಲಿ ಅಮಾವಾಸ್ಯೆ,ಹುಣ್ಣಿಮೆ,ಸಂಕ್ರಮಣ ಇವುಗಳ ವಿಶೇಷದಿಂದ ಬೆಲೆಗಳ ಹೆಚ್ಚುಕುಂದುಗಳನ್ನು ವಿವರಿಸಿ ನಕ್ಷತ್ರಗುಣಾಕಾರ(ನಕ್ಷತ್ರಗಳಿಗೆ ಕೂಡಿಸಿಕೊಳ್ಳುವ ಸಂಖ್ಯೆಯನ್ನು ) ವನ್ನೂ, ರಾಶಿಗುಣಾಕಾರ (ರಾಶಿಗಳಿಗೆ ಸೇರಿಸಿಕೊಳ್ಳುವ ಸಂಖ್ಯೆ), ಗ್ರಹಗುಣಾಕಾರ (ಗ್ರಹಗಳಿಗೆ ಸೇರಿಸಿಕೊಳ್ಳುವ ಸಂಖ್ಯೆ) ಇವನ್ನೂ ಹೇಳಿ ಬೇರೆಬೇರೆ ಆಚಾರ್ಯರು ಹೇಳಿರುವ ನಕ್ಷತ್ರರಾಶಿಗ್ರಹಗುಣಾಕಾರಗಳನ್ನು ಮತ್ತೆ ಹೇಳಿ (ಆರಂಭದಲ್ಲಿ ನಂದಾಚಾರ್ಯರ ಮತ್ತೆ ಮತ್ತೊಬ್ಬ ಆಚಾರ್ಯರ ಮತ) ಈ ಗುಣಾಕಾರಗಳ ಆಧಾರದಿಂದ, ಎಳ್ಳು ಮೊದಲಾದ ಧಾನ್ಯ ಮತ್ತು ಲೋಹಗಳ ಬೆಲೆಗಳ ಹೆಚ್ಚುಕುಂದುಗಳನ್ನು ವಿವರಿಸಿ, ಸಂಕ್ರಾಂತಿ ಲಕ್ಷಣಫಲವನ್ನು ಹೇಳಿ ಮತ್ತೆ ನಕ್ಷತ್ರರಾಶಿಗ್ರಹಗುಣಾಕಾರಗಳನ್ನು ಹೇಳಿ, ಈ ಗುಣಾಕಾರವನ್ನು ಕೂರ್ಮಚಕ್ರಕ್ಕೆ ಅನ್ವಯಿಸಿ, ಅದರಿಂದಾಗುವ ಮಳೆ, ಬೆಳೆ, ಬೆಲೆಗಳ ಫಲವನ್ನು ಹೇಳಿ (ಎಂದರೆ ಕೂರ್ಮಚಕ್ರದಲ್ಲಿ ಕೂರ್ಮದ ಅವಯವಗಳಲ್ಲಿರುವ ನಕ್ಷತ್ರಗಳಲ್ಲಿ ಶನ್ಯಾದಿಗ್ರಹಗಳು ನೆಲೆಸಿರುವ ಫಲ), ಶನಿಯು ನಕ್ಷತ್ರಗಳಲ್ಲಿ ಚರಿಸುವ ಫಲ, ಗುರುವು ಮೇಷಾದಿ ಹನ್ನೆರಡು ರಾಶಿಗಳಲ್ಲಿ ಚರಿಸುವ ಫಲ, ಗುರುವಿನ ಉದಯಾಸ್ತಮಯದಿಂದಾಗುವ ಫಲ, ಗುರುವು ಎರಡು, ಮೂರು ನಕ್ಷತ್ರಗಳಲ್ಲಿ ನೆಲಸಿದ ಫಲ, ನಕ್ಷತ್ರವನ್ನು ಶಕಟಾಕಾರವಾಗಿ ವಿಭಾಗಿಸಿ, ಆ ಶಕಟದ ಶರೀರ, ಹೃದಯ, ಹೊಕ್ಕುಳು, ಕಣ್ಣು, ಇವುಗಳಲ್ಲಿ ಗುರುವು ನೆಲಸಿದ ಫಲ, ಗುರುವೀಧಿಯಚಾರಫಲ, ಗುರುವು 13, 11, 10,14 ತಿಂಗಳುಗಳು ಹಿಂದೊಂದು ರಾಶಿಯಲ್ಲಿದ್ದರೆ ಆ ವರ್ಷಗಳಿಗೆ ಕ್ರಮವಾಗಿ ಪರಿವತ್ಸರ (ದೈವ-ಆದಿತ್ಯವರ್ಷ) ಗುರುವತ್ಸರ, ವತ್ಸರ (ಈಶ್ವರನ ವರ್ಷ) ಅನುವತ್ಸರ ಎಂಬ ಹೆಸರುಗಳನ್ನು ಹೇಳಿ ಅವುಗಳಲ್ಲಾಗುವ ಮಳೆ ಬೆಳೆ ಬೆಲೆಗಳ ಹೆಚ್ಚುಕುಂದುಗಳನ್ನು ವಿವರಿಸಿ, ಒಟ್ಟಿನಲ್ಲಿ ಗ್ರಹದೃಷ್ಟಿಯ ಫಲವನ್ನು ವಿವರಿಸಿ ಅಧ್ಯಾಯವನ್ನು ಉಪಸಂಹರಿಸಿ ಗ್ರಂಥವನ್ನು ಸಮಾಪ್ತಿಗೊಳಿಸಿರುವನು.

## ಗ್ರಂಥಕರ್ತೃವಿನ ವಿಚಾರ

ಕವಿಯ ಹೆಸರು—ಈ ಗ್ರಂಥವನ್ನು ಬರೆದ ಕವಿಗೆ [1]ಅಟ್ಟ(ಅಟ್ಟವೆಡಂಗ)[2]ಅಟ್ಟಗ ಎಂದು ಹೆಸರು. [3]ಅಟ್ಟಯ್ಯ, [4]ಅಟ್ಟಣ್ಣ ಎಂದೂ ವ್ಯವಹಾರ ಉಂಟು. ವಿಚಾರಮಾಡಿನೋಡಿದರೆ ಈ ಹೆಸರು ಕವಿಯ ಹುಟ್ಟು ಹೆಸರಲ್ಲ(ಅಂಕಿತನಾಮ)ವೆಂದು ತೋರಿಬರುತ್ತದೆ. ಇದು ಪ್ರಾಯಶಃ ಕವಿಯು ಅಟ್ಟವಂಶದವನಾದುದರಿಂದ ಬಂದ ಹೆಸರಾಗಿರಬಹುದು. ಕವಿಯು ಪದ್ಯ ೨೩ರಲ್ಲಿ ತನ್ನ ಹೆಸರನ್ನು ಅಟ್ಟವೆಡಂಗನೆಂದು ಹೇಳಿ, ೨೪ ರಲ್ಲಿ ಬೂತುಗನಣುಗನೆಂದೂ ಹೇಳಿಕೊಂಡಿರುವನು. ಬೂತುಗನೆಂಬ ಗಂಗರಾಜನ ಆಶ್ರಿತನಾಗಿದ್ದುದರಿಂದ ಬೂತುಗನಣುಗನೆಂದು ಹೇಳಿಕೊಂಡಿರುವನೆಂದು ಊಹಿಸಬಹುದೇ ಹೊರತು ಬೂತುಗನಮಗನೆಂದು ಹೇಳಿ ಇವನ ತಂದೆ ನಾಗಕುಮಾರನಿಗೆ ಬೂತುಗನೆಂಬ ಹೆಸರಿದ್ದಿರಬಹುದೆಂದು ಊಹಿಸುವುದು ಸುರಸವಲ್ಲ. ಈ ಕವಿಯು ಹಲವು

---

1 ಪ್ರ. ೧೩, ತೃ. ೪, ಚ. ೪, ೫, ೮, ೧೯, ೨೬, ಪಂ. ೨, ೬, ೧೯, ೨೦, ೨೪, ಷ. ೨೪-೧೮, ೨೩, ೨೯, ೫೬, ೪೫, ೫೫, ೫೯, ಅ. ೨೧, ೨೩, ೭೯, ೯೬, ಅ. ೬, ೭, ೧೪, ೨೧, ೨೩, ೨೪, ೩೬, ೪೪, ೪೫, ೪೮, ೫೦, ನ. ೧೭, ೨೫, ಏ. ೪೪, ೪೫, ೪೯, ದ್ವಾ. ೪, ೬, ೧೨, ೧೩, ೧೫, ೨೨, ೨೪, ೨೬, ೨೭, ೩೧, ೪೬, ೫೬, ೫೮, ೬೦, ೬೪, ೬೧. 2 ದ್ವಿ. ೨, ಪಂ. ೧೮, ಷ. ೭, ೩೦, ೧೨, ೭೭, ಚ. ೧೮, ಸ. ೧೪೨, ಏ. ೧೦, ೩೪, ದ್ವಾ. ೩. 3. ದ್ವಿ. ೧, ಸ.೨೮. 4. ಸ. ೩೦.

ಪದ್ಯಗಳ ಕೊನೆಯಲ್ಲಿ ತನ್ನ ಹೆಸರನ್ನೂ, ಬಿರುದುಗಳನ್ನೂ ಹೇಳಿಕೊಂಡಿರುವನು. ಇವುಗಳಲ್ಲಿ ಮೂರುನಾಲ್ಕು ಪದ್ಯಗಳ ಕೊನೆಯಲ್ಲಿ ಮಾಚ, ಮಾಚಿಗ ಎಂಬ ಶಬ್ದಗಳಿರುವುದರಿಂದಲೂ, ೨೨ನೆ ಪದ್ಯದಲ್ಲಿ ಅನನ್ವಿತವಾಗಿ ತ್ರಿಮೂರ್ತಿಗಳಂತೆ ಘಳಿಯಮರ್ಮ, ಜಸವಯ್ಯ, ಕುಲತಿಲಕಮಾಚಿಮಯ್ಯ ಎಂಬೀ ಪ್ರಭುಗಳ್ ಎಂದು ಮೂವರ ಹೆಸರನ್ನೂ ಮುಂದಣ ಪದ್ಯದಲ್ಲಿ ಅಟ್ಟವೆಡಂಗನೆಂದು ತನ್ನನ್ನೂ ಹೇಳಿಕೊಂಡಿರುವುದರಿಂದ ಈ ಕವಿಯ ನಿಜವಾದ ಹೆಸರು ಮಾಚಿಮಯ್ಯ ಅಥವಾ ಮಾಚ, ಮಾಚಿಗ ಎಂದು ಊಹಿಸುವುದು ಸಮಂಜಸವಾಗಿರುವುದು. ಮತ್ತು ಇವನ ವಂಶದಲ್ಲಿ [1]ಮಾಚನೆಂಬವನಿದ್ದನೆಂದು ೧೬ನೆಯ ಪದ್ಯದಲ್ಲಿ ಹೇಳಿರುವುದರಿಂದ ಪುತ್ರಾತ್ರನಾದ ಮಾಚನ ಹೆಸರು ಇವನಿಗಿತ್ತೆಂಬುದನ್ನು ಪುಷ್ಟೀಕರಿಸುವುದು. ಹಿಂದಣ ಪದ್ಯದಲ್ಲಿ ಮಾಚಿಮಯ್ಯನೆಂದು ಹೇಳಿ ಮುಂದಣ ಪದ್ಯದಲ್ಲಿ ಅಟ್ಟವೆಡಂಗನೆಂಬ ತನ್ನ ಬಿರುದಿನ ಹೆಸರು ಅಥವಾ ಅಡ್ಡಹೆಸರ (ರೂಢಿಯ)ನ್ನು ಹೇಳಿಕೊಂಡಿರುವನೆಂದು ಹೇಳುವುದು ದರಲ್ಲಿ ಯಾವ ದೋಷವೂ ಇಲ್ಲ.

ಕವಿಯ ವಂಶಾನುಚರಿತ—ಕವಿಯ ಮೂಲಪುರುಷನು ಕಾಡಮರಸನು. ಇವನು ಮಾರಸಿಂಹನೆಂಬ ತಲಕಾಡಿನ (ಸು. ಕ್ರಿ.ಶ. 961-974) ಗಂಗರಾಜನಲ್ಲಿ ದಂಡನಾಯಕನಾಗಿದ್ದು ಆತನ ಹಗೆಗಳನ್ನೆಲ್ಲಾ ಅಡಗಿಸಿ ಅಧನಿಂದ "ಪರಬಲಕೃತಾಂತ" ನೆಂಬ ಬಿರುದನ್ನು ಪಡೆದಿದ್ದನು. ಮತ್ತು ಒಂದು ಕಾಲದಲ್ಲಿ ತಲಕಾಡನ್ನು ಮುತ್ತಿದ ಚಕ್ರವರ್ತಿಯ (ಈ ಚಕ್ರವರ್ತಿಯು ಪ್ರಾಯಶಃ ಆ ಕಾಲದ ಚಾಲುಕ್ಯ ಚಕ್ರವರ್ತಿ ಆಹವಮಲ್ಲನಿರಬಹುದು) ದಂಡನ್ನು ಸೋಲಿಸಿ ದಿಕ್ಕುಪಾಲಾಗಿ ಓಡಿಸಿ ಆ ಯುದ್ಧದಲ್ಲಿ ಸೇರಿದ್ದ ಚಕ್ರವರ್ತಿಯ ಹನ್ನೆರಡು ಮಂದಿ ಸಾಮಂತರಾಜರನ್ನೂ ಗೆದ್ದು ರಾಜನಿಂದ ಇಪ್ಪತ್ತಯ್ದು ಗ್ರಾಮ(ಬಾಡ)ಗಳನ್ನು ಮಾನ್ಯವಾಗಿ ಪಡೆದನು. ಹೀಗೆ ಪ್ರಸಿದ್ಧನಾಗಿದ್ದ ಕಾಡಮರಸನ ಹಿರಿಯಮಗ ಪ್ರಭುಚೋರ, ಅವನ ಮಗ ಆಯುಕ, ಅವನ ಮಗ ಶುಭಾಕರ, ದಾವ, ಅವನ ಮಗ ಶಿವಮಾರಿದೇವ, ಮಗ ಜನಾರ್ದನ, ಅವನ ಹಿರಿಯ ಮಗ [2]ಎಱೆಯ(ಗ)ಂಗ (ಪ್ಪ), ಮಗ ವಿಕ್ರಮಾರ್ಕ, ಮಗ ವೀರಕಾಡಮರಸ, ಅವನ ಸಂತತಿಯಲ್ಲಿ ಪ್ರಸಿದ್ಧನಾದವನು ಕುಂಚ[3] ಅವನ ಮಗ ಮಾಚ, ಮಗ ದೋರಯ್ಯ, ಮಗ ತಾ(ಮಾ)ರಯ್ಯ, ಮಕ್ಕಳು ನಾಗಕುಮಾರ, ಶ್ರೀರಾಮ, ಚಿಕ್ಕಪಯ್ಯ. ಭಾರದ್ವಾಜಗೋತ್ರದ ಈ ಚಿಕ್ಕಪಯ್ಯನು ನಾಲ್ವತ್ತೊಂದು ಕುಲಕ್ಕೆ ತಿಲಕನಾಗಿ ಅದ್ಭುತಚರಿತನೆಂದು ಪ್ರಸಿದ್ಧಿಪಡೆದಿದ್ದನು. ಅವನ ಮಗ ಕುಂಚತೇಜ ಅಥವಾ ಜಯ ಬಂಧುಸಜ್ಜನ ಇವರೆಲ್ಲರೂ ಗಂಗರಾಜರ ಆಶ್ರಿತರಾಗಿ, ಗಂಗರರಮನೆಯಲ್ಲೇ ಬಳೆಯುತ್ತಿದ್ದವರು. ಮೇಲೆಹೇಳಿದ ನಾಗಕುಮಾರನ ಮಕ್ಕಳು. ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳಂತೆ ಪೂಜ್ಯ[4]ರಾದ, ಘಳಿಯಮರ್ಮ, ಜಸವಯ್ಯ, ಮಾಚಿಮಯ್ಯ, ಎಂಬ ಪ್ರಭುಗಳಿದ್ದರು. ಇವರಲ್ಲಿ ಮಾಚಿಮಯ್ಯನೆಂಬುವನೇ ಆಗಮಕೋವಿದ, ಉದಾರಚಿಂತಾಮಣಿ, ವಾಕ್ಶ್ರೀನಿಲಯ, ಸುಕವಿನಿಧಾನ, ಜನನುತಗುಣಿ, ವಿತತಕೀರ್ತಿ ರಮಣೀರಮಣ, ಮನಸಿಜಸನ್ನಿಭ, ವಿನಯಗುಣೋತ್ತುಂಗ ಎಂಬಬಿರುದುಗಳುಳ್ಳ ಈ ಗ್ರಂಥಕರ್ತನಾದ ಅಟ್ಟ(ಅಟ್ಟವೆಡಂಗ)ಕವಿ. ಈತನು ತನ್ನನ್ನು ಬೂತುಗ ನಣುಗ, ವಿನಯಾಂಬುರಾಶಿ, ಸುಕವಿನಿಧಾನ, ಪ್ರಣಿತಜಿನಭಕ್ತರೊಳ್ಪಿನ ಗಣಿ, ನಿರ್ಮಲಕೀರ್ತಿ ನೇಮಿ, ಪುಸಿವರ ಶೂಲ ಎಂಬ ಬಿರುದುಗಳಿಂದ ಹೊಗಳಿಕೊಂಡು ಅಭಯಾಂಬುನಿಧಿಯೆನಿಸಿದ ತಾನು ತನ್ನ ಮಗಳಾದ ಚಂದ್ರಲೇಖೆಗೆ ಸಂಸ್ಕೃತಸಂಹಿತೆಯಾದ ಮೇಘಾಡಂಬರವೆಂಬ ಈ ಗ್ರಂಥವನ್ನು ಕನ್ನಡಭಾಷೆಯಲ್ಲಿ ಹೇಳಿದನು ಎಂದು ಹೇಳಿ ಗ್ರಂಥವನ್ನಾರಂಭಿಸಿರುವನು.

---

1. ಕವಿಚರಿತ್ರಕಾರರು ಈ ಮಾಚ ಎಂಬಲ್ಲಿ ದೋರ ಎಂದು ಹೇಳಿರುವರು, ಹಾಗೆ ಹೇಳುವುದು ಅನನ್ವಿತವಾಗುವುದು. 2. ಕವಿಚರಿತ್ರಕಾರರು ಎಱೆಗಂಗ ಎಂದು ಅರ್ಥಮಾಡಿರುವರು. 3. ಕವಿ ಇವನ ಮೊಮ್ಮಗನ ಮಗ. 4. ಈ ಪದ್ಯದಲ್ಲಿ ಘಳಿಯರ್ಮ ಮೊದಲಾದ ಹೆಸರುಗಳು ಹೀಗೆ ಅರ್ಥ ಮಾಡದಿದ್ದರೆ ಅನನ್ವಿತಗಳಾಗುವುವು.

ಕಾಲ—ಇವನ ನಿರ್ದಿಷ್ಟಕಾಲವನ್ನು ತಿಳಿಯಲು ಸ್ವಲ್ಪವೂ ಆಧಾರವಿಲ್ಲ. ಸು. ಕ್ರಿ. 947 974ರಲ್ಲಿದ್ದ ಮಾರಸಿಂಹನ ದಂಡನಾಯಕನಾಗಿದ್ದ ಈತನ ಮೂಲಪುರುಷನಾದ ಕಾಡಮರಸನಿಗೆ ಹದಿನೈದನೆಯತಲೆಯವನಾದ ಈತನು ಸುಮಾರು[1] ಮುನ್ನೂರಿಪ್ಪತ್ತೈದು ವರುಷಗಳ ಈಚೆಯಲ್ಲಿ ಎಂದರೆ ಕ್ರಿ.ಶ. ಸು 1300 ರಲ್ಲಿದ್ದಿರಬಹುದೆಂದು ಊಹಿಸಿ ಹೇಳಬೇಕಾಗಿರುವುದು.

ಈತನ ಬಿರುದುಗಳು— ಈತನು ತನ್ನ ಬಿರುದುಗಳನ್ನು ಗ್ರಂಥದ ಆದಿಯಲ್ಲೂ, ಗ್ರಂಥದ ಹಲವು ಪದ್ಯಗಳಲ್ಲೂ ಅಲ್ಲಲ್ಲಿ ಹೇಳಿಕೊಂಡಿರುವನು. [2]ಆಗಮಕೋವಿದಂ, ಉದಾರಚಿಂತಾಮಣಿ, ವಾಕ್ಛ್ರೀಗೆ ನಿಧಾನಂ, ಅಭಿಮಾನ ಜಲಧಿ, ಸುಕವಿನಿಧಾನಂ,[3] ಜನಕನುರಾಗದೆನೆಗಟ್ಟಿಂ ಜನನುತಗುಣಿ (ಮತಿ) ಕೀರ್ತಿರಮಣೀರಮಣಂ, ಮಹಿಜಸನ್ನಿಭಂ, ವಿನಯಗುಣೋತ್ತುಂಗಂ, ಅಟ್ಟವೆಡಂಗಂ[4], ಗುಣಪಕ್ಷಪಾತಿ, ವಿನಯಾಂಬುರಾಶಿ, ಪ್ರಣುತಜಿನಭಕ್ತಂ, (ಒಳ್ಪಿನ ಕಣಿ), ನಿರ್ಮಲಕೀರ್ತಿನೇಮಿ, ಪುಸಿವರಶೂಲಂ[5], ಅಭಿಯಾಂಬುಧಿ[6], ಜೋಯಿಸ ಚಕ್ರವರ್ತಿ, ಕೀರ್ತಿನಾರಾಯಣಂ[7], ಕವಿಗಳಾಭರಣಂ[8], (ಪ್ರಭು) ಕವಿಪಂಕಜಭವಂ,[9] ಅಟ್ಟಕವೀಂದ್ರಂ, ಕವಿ[10] ಅಕ್ಷರಪ್ರಿಯಂ[11], ನಯಬಂಧು,[12] ಬಂಧುಮಿತ್ರಂ[13], ಸುಜನೈಕಭಾಂಧವಂ[14] ವಿಶಿಷ್ಟಪ್ರಿಯಂ, ಒಳ್ಪಿನಕಣಿ[15], ಒಳ್ಪಿನಅಟ್ಟಂ[16], ಬಿನ್ನಣ ಅಟ್ಟಗಂ[17], ಸಮ್ಯಕ್ತ್ವರತ್ನಾಕರಂ[18], ಅರ್ಹದ್ದಾಸಂ[19], ಜಿನಪದದಾಸಂ[20], ಅಭಿನವಗಾರ್ಗ್ಯಂ[21], ಜಿನನಗರಪತಿ[22].

ಈ ಬಿರುದುಗಳಿಂದ ಈತನು ಶಾಸ್ತ್ರಗಳನ್ನು ಬಲ್ಲವನು, ದಾನಶೀಲ, ವಾಗ್ಮಿ, ಅಭಿಮಾನಿ, ಸುಕವಿಗಳಿಗೆ ನಿಧಿಯಂತಿರುವವನು, ಪ್ರಜೆಗಳ ಅನುರಾಗಕ್ಕೆ ಪಾತ್ರನು, ಒಳ್ಳೆಯ ಗುಣಶಾಲಿ, ಕೀರ್ತಿವಂತ, ಸುಂದರ, ವಿನಯಶಾಲಿ, ಗುಣಪಕ್ಷಪಾತಿ, ಉತ್ತಮನಾದ ಜಿನಭಕ್ತ, ಸುಳ್ಳುಹೇಳದವ (ಸತ್ಯವಂತ) ಭಯಪಟ್ಟವರಿಗಭಯವನ್ನು ನೀಡುವವ, ಜ್ಯೋತಿಶ್ಶಾಸ್ತ್ರ ಚಕ್ರವರ್ತಿ, ಶ್ರೇಷ್ಠನಾದ ಕವಿ, ವಿದ್ಯಾವಂತ, ನಯಶಾಲಿ, (ನೀತಿಯನ್ನು ಬಿಡದವನು), ವಿದ್ವಾಂಸರಿಗೆ ಆಶ್ರಯನು, ಒಳ್ಳೆಯವರನ್ನು ಪ್ರೀತಿಸುವವನು. ಒಳ್ಳೆಯ ಸಾಧುವು, ಬಿನ್ನಣಿ, (ಚತುರ) ಸಂಸ್ಕೃತ ಜ್ಯೋತಿಶ್ಶಾಸ್ತ್ರ ಕರ್ತೃವಾದ ಗಾರ್ಗ್ಯರಂತೆ ಕನ್ನಡದಲ್ಲಿ ಜ್ಯೋತಿಶ್ಶಾಸ್ತ್ರಕರ್ತೃವೆನಿಸಿ ಪ್ರಸಿದ್ಧನಾದವನು, ಜಿನನಗರವೆಂಬ ಪಟ್ಟಣದೊಡೆಯನು ಎಂದು ತಿಳಿದುಬರುವುದು.

ಕವಿಯ ದೇಶ—ಈತನು ತನ್ನನ್ನು ಜಿನನಗರಪತಿ, ಪ್ರಭು ಎಂದು ಹೇಳಿಕೊಂಡಿರುವುದರಿಂದ ಜಿನನಗರವೆಂಬ ಒಂದು ಗ್ರಾಮದ ಒಡೆಯನಾಗಿದ್ದಂತೆ ತಿಳಿದುಬರುವುದು. ಈತನ ಮೂಲಪುರುಷನಾದ ಕಾಡಮರಸನು ಜಿನನಗರಪತಿಯಾಗಿದ್ದು ತಳಕಾಡ ಗಂಗರಾಜ ಮಾರಸಿಂಹನ ದಂಡನಾಥನೆನಿಸಿ, ಅವನ ಶತ್ರುಗಳನ್ನಡಗಿಸಿ ಅವನಿಂದ ತುಂಬಾ ಐಶ್ವರ್ಯವನ್ನೂ, 25 ಗ್ರಾಮಗಳನ್ನೂ ಮಾನ್ಯವಾಗಿ ಪಡೆದನೆಂದು ತಿಳಿದುಬರುವುದರಿಂದ ಈತನು ಮೈಸೂರುಸೀಮೆಯ ತಳಕಾಡಿನ ಹತ್ತಿರದ ಜಿನನಗರದ ಒಡೆಯನಾಗಿದ್ದನೆಂದು ಹೇಳಬಹುದು. ಇದರಿಂದ ಈತನು ಮೈಸೂರು ದೇಶದವನೆಂದು ಊಹಿಸಲವಕಾಶವುಂಟು.

---

1. ಒಂದು ತಲೆಮಾರಿಗೆ 25 ವರುಷಗಳೆಂದು ಬಳಕೆಯಿದೆ. 2 ಪ್ರ. ೨೧.೨೪; 3 ಪ್ರ. ೨೧, ೨೪; ಷ. ೧೦; ಏಕಾ. ೧೬, ೩೫; ದ್ವಾ. ೫. 4 ಪ್ರ. ೩೩ ಪಂ. ೫; ಷ. ೩೫; ಅ. ೨೨, ೩೭, ೧೨೧,೧೯೦, ೧೯೬. 5 ಪ್ರ. ೨೪; ಷ. ೪೨; ಸ. ೧೩೬ ಚ. ೪೨. 6 ಪ್ರ. ೨೫. 7 ಪ. ೩೪. 8 ಷ. ೪೩; ಅ. ೯೮. 9 ಸ. ೯ 10. ಷ. ೪೬; ಏ. ೨೨-೨೮. 11 ಷ. ೨೪, ೩೧, ೧೨; ಸ. ೯೮, ೧೩೪; ಅ. ೭೦; ದ್ವಾ.೮, ೯. 13 ದ್ವಾ. ೬೫. 13 ಅ. ೧೬೪ ೧೮೧. 14 ಅ. ೮೬. 15 ಷ. ೨೪. 16 ಷ. ೪೫; ಸ. ೨೭, ೩೫, ೩೭, ೭೦, ೧೪೦; ಅ.೪೫, ೬೦, ೬೬, ೮೨, ೧೦೭, ೧೭೧, ನ. ೨೧, ೩೯, ಏ. ೧೩. 17 ದ್ವಾ. ೮೪. 18 ಷ, ೧೯; ಸ. ೧೬, ೭೮ ೧೩೮; ಅ. ೧, ೨೦೨. 19 ಚ. ೧೨, ೨೦; ಪಂ ೧೪, ೨೧,; ಷ. ೨೦; ಸ, ೪೬. 20 ಸ. ೨೬. 21 ದ್ವಾ. ೧೧೫, ೧೧೮, ೧೨೮, ೧೩೦. 22 ಸ.೧೫ ೫೧; ಅ. ೬೮, ೧೫೬.

ಮತ್ತು—ಈ ಕವಿಯು ಜಿನಮತೀಯನು, ಬ್ರಾಹ್ಮಣ ವರ್ಣದವನು, ಭಾರದ್ವಾಜ ಗೋತ್ರಕ್ಕೆ ಸೇರಿದವನು ಎಂಬುದು, ಈತನು ಗ್ರಂಥಾದಿಯ ಮಂಗಳಪದ್ಯಗಳಲ್ಲಿ ಅರ್ಹದಾದಿ ಪಂಚ ಪರಮೇಷ್ಠಿ ಯಕ್ಷ ಯಕ್ಷಿ ಸರಸ್ವತಿಯರನ್ನು ಸ್ತುತಿಸಿರುವುದು, ಗ್ರಂಥದೊಳಗೆ ಅಲ್ಲಲ್ಲಿ ಜಿನಪದ ದಾಸ, ಅರ್ಹದ್ದಾಸ, ಎಂದು ಹೇಳಿಕೊಂಡಿರುವುದು, [1]ಬ್ರಹ್ಮವಂಶೋದ್ಭವನೆಂದು ಹೇಳಿಕೊಂಡಿ ರುವುದು ಇವುಗಳಿಂದ ಸ್ಪಷ್ಟವಾಗಿ ತೋರುವುದು.

ಈತನು ಸಂಸ್ಕೃತದಲ್ಲಿ ಗಾರ್ಗ್ಯವರಾಹಮಿಹಿರಾದಿಗಳು ಬರೆದಿದ್ದ ಸಂಹಿತೆಗಳ ಸಾರವನ್ನು ತೆಗೆದುಕೊಂಡು ಜ್ಯೋತಿಶ್ಶಾಸ್ತ್ರದಲ್ಲಿ ಮಳೆಯಸ್ವರೂಪವನ್ನು ತಿಳಿಸುವ ಈ ಸಣ್ಣಗ್ರಂಥವನ್ನು ಕನ್ನಡದಲ್ಲಿ ಬರೆದು ಕನ್ನಡಿಗರಿಗೂ, ಕನ್ನಡ ಸಾಹಿತ್ಯಕ್ಕೂ ವಿಶೇಷವಾಗಿ ಒತ್ತಾಸೆಮಾಡಿರು ವನು. ಈತನು ಹೇಳಿರುವ ಗಾರ್ಗ್ಯಾದಿ ಸಂಹಿತೆಗಳೊಂದೂ ಪ್ರಕೃತದಲ್ಲಿ ದೊರಕದಿದ್ದುದರಿಂದ* ಈ ಗ್ರಂಥದ ವಿಷಯದಲ್ಲಿ ಇನ್ನು ಹೆಚ್ಚು ಹೇಳಲು ಅವಕಾಶವಿಲ್ಲ. ಈ ಗ್ರಂಥದಲ್ಲಿ ಕೆಲವುಕಡೆ ಸಂವಾದಿಯಾಗುವ ಸಂಸ್ಕೃತ ಶ್ಲೋಕಗಳಿವೆ. ಅವನ್ನೂ ಅಲ್ಲಲ್ಲಿ ಕೊಟ್ಟಿದೆ. ಈ ಶ್ಲೋಕಗಳನ್ನು ಗ್ರಂಥಕರ್ತೃವೇ ಗುರ್ತಿಸಿದ್ದನೋ ಅಥವಾ ಗ್ರಂಥಲೇಖಕಪಂಡಿತರು ಸೇರಿಸಿರುವರೋ ನಿರ್ಧರಿ ಸಲು ಆಧಾರವಿಲ್ಲ.

ಈತನು ತನ್ನನ್ನು ಕವಿಗಳಾಭರಣ, ಸುಕವಿನಿಧಾನ ಮೊದಲಾದ ಬಿರುದಿನಿಂದ ಹೊಗ ಳಿಕೊಂಡಿರುವುದರಿಂದ ಈ ಪ್ರಸಿದ್ಧನಾದ ಕವಿಯಾಗಿದ್ದನೆಂದು ತೋರುವುದು. ಇದರಿಂದ ಇವನು ಇನ್ನೂ ಹಲವು ಕಾವ್ಯಗಳನ್ನು ಬರೆದಿರಬಹುದು. ಅವುದೊಂದೂ ಇದುವರೆಗೆ ದೊರಕಿಲ್ಲ. ಕವಿಯೂ ಈ ಗ್ರಂಥದಲ್ಲಿ ಆ ವಿಷಯವನ್ನು ಸಾಕ್ಷಾತ್ತಾಗಿ ಹೇಳಿಲ್ಲ, ಸೂಚಿಸಿಯೂ ಇಲ್ಲ. ಅರ್ವಾಚೀನರಾದ ಇತರ ಕವಿಗಳೂ ಹೇಳಿಲ್ಲ.

ಈ ಗ್ರಂಥವನ್ನು ದೊರಕಿದ ಅಯ್ದು ಹಸ್ತಲಿಖಿತಪ್ರತಿಗಳ ಸಹಾಯದಿಂದ ಯಥಾಮತಿ ಶೋಧಿಸಿ ಮುದ್ರಿಸಿರುವೆನು. ಇದರಿಂದ ಕನ್ನಡಿಗರಿಗೂ, ಕನ್ನಡಭಾಷೆಗೂ, ಯತ್ಕಿಂಚಿತ್ತಾದರೂ ಪ್ರಯೋಜನವಾಗುವುದಾದರೆ ಮುದ್ರಣ ಪರಿಶ್ರಮವು ಸಫಲವಾಗುವುದು.

ಈ ಅತ್ಯುತ್ತಮವಾದ ಗ್ರಂಥದ ಮುದ್ರಣಕ್ಕೆ ಉದಾರಭಾವದಿಂದ ದ್ರವ್ಯಸಹಾಯ ಮಾಡಿದ ಮದ್ರಾಸ್ ಗವರ್ನಮೆಂಟಿಗೂ, ಇದನ್ನು ಮುದ್ರಿಸಲು ಪ್ರೋತ್ಸಾಹವಿತ್ತ ಮದ್ರಾಸ್ ಗವರ್ನಮೆಂಟ್ ಓರಿಯೆಂಟಲ್ ಲೈಬ್ರರಿ ಕ್ಯೂರೇಟರಿಗೂ ನನ್ನ ಕೃತಜ್ಞತೆಯನ್ನು ಸೂಚಿಸಿ ಪ್ರಕೃ ತೋಪನ್ಯಾಸವನ್ನು ಕೊನೆಮುಟ್ಟಿಸಿರುವೆನು.

ಸಂಪಾದಕ
**ಹೆಚ್. ಶೇಷಯ್ಯಂಗಾರ್,**
ರಿಟೈರ್ಡ್ ಕನ್ನಡ ಲೆಕ್ಚರರ್, ರಿಸರ್ಚ್ ಇನ್ಸ್ಟಿಟ್ಯೂಟ್,
ಮದ್ರಾಸ್ ಯೂನಿವರ್ಸಿಟಿ.

1 ಪ. ೪೭, ಪಂಕಜಗರ್ಭವಂಶತಿಲಕಂಪ್ರಭು(ಪ. ೨೫) ನಾಭಿಯ ಪಂಕೇಜಭವ ಭವ(ಸ.೬) ಅರವಿಂದಜ ವಂಶಜಾತ(ದ್ವಾ. ೭) ಪಂಕೇಜಮಿ(ಪು)ತ್ರಾತ್ಮಜ(ದ್ವಾ. ೭೦).

* ಮದ್ರಾಸ್ ಓರಿಯಂಟಲ್ ಲೈಬ್ರರಿಯಲ್ಲಿ ಗಾರ್ಗ್ಯಸಂಹಿತೆಯೆಂಬ ಗ್ರಂಥವೊಂದು ಸಂಸ್ಕೃತಗ್ರಂಥ ಗಳ ಪಟ್ಟಿಕೆಯಲ್ಲಿದೆ, ಅದರಲ್ಲಿ ಆದಿಯಲ್ಲಿ ಕೆಲವು ಸಂಸ್ಕೃತಶ್ಲೋಕಗಳೂ ಅವುಗಳ ಟೀಕೆಗಳೂ ಕೆಲವು ಕನ್ನಡ ಪದ್ಯಗಳೂ ಕೊನೆಯಲ್ಲಿ ಕೆಲವು ಸಂಸ್ಕೃತ ಪದ್ಯಗಳೂ ಇವೆ. ಕನ್ನಡ ಪದ್ಯಗಳಲ್ಲಿ ಮಾತ್ರ ಇಲ್ಲಿ ಹೇಳಿ ರುವ ಕೆಲವು ವಿಷಯಗಳಿವೆ. ಸಂಸ್ಕೃತಭಾಗದಲ್ಲಿ ವಿವಾಹಾದಿ ಕೂಟಗಳನ್ನು ನೋಡುವ ಕ್ರಮವನ್ನು ಹೇಳಿದೆ.

# ವಿಷಯಸೂಚಿ



# [1]ರಟ್ಟಶಾಸ್ತ್ರ(ಮತ)ಂ

## ಪ್ರಥಮಾಧ್ಯಾಯಂ

### ಪೀಠಿಕಾ ಪ್ರಕರಣಂ

(ಪಂಚಾಚಾರ್ಯ ಸ್ತುತಿ)

ಕಂ|| ಶ್ರೀಯಂ ನಿಜಪಾದದ್ವಯು |
ತೋಯಧಿಯೊಳ್ ತಾಳ್ದು ಮೋಕ್ಷಲಕ್ಷ್ಮಿಯ ನೊಲಸಿ ||
ಪಾರ್ಯತಕೀರ್ತಿ ಜಿನೇಂದ್ರಂ ||
ಶ್ರೀಯಾಂಸಂ ನಮಗೆ ಮಾಟ್ಕಿ [2]ಸೌಖ್ಯಮನಯದಿ(ವನಿತ)ಂ ||೧||

ಬದ್ಧಾಷ್ಟಕರ್ಮಮಂ ನಿಜ |
ಬುದ್ಧಿಯ ಬಲದಿಂದನಂತಚಾತುಷ್ಟಯದಿಂ ||
[3]ದುದ್ಧತ ರಿಪುಗಳನುರಿಸಿದ |
ಸಿದ್ಧರ್ ಲೋಕಪ್ರಸಿದ್ಧರೀಗೆಮಗೊಳ್ಪಂ ||೨||

ಶೌರ್ಯಯುತರ್ ಧೈರ್ಯಪರರ್ |
ಕಾರ್ಯವಿದರ್ ಜಗದೊಳೆನಿ[4]ಸಿಯುಂ ಮೋಕ್ಷದೊಳಂ ||
ಧೈರ್ಯಮನೆ ಬಯಸುತಿರ್ಪಾ |
ಚಾರ್ಯರ್ ಪದಕಮಲಯುಗಳ ವಿಾಗೆಮಗೊಳ್ಪಂ ||೩||

ನ್ಯಾಯದೊಳೆ ನಡೆಯೆ ಕೀರ್ತಿ |
ಶ್ರೀಯುಕ್ಕು ವಿ[6]ಹತ್ರಯನ್ಯಭವದೊಳ್ ಮುಕ್ತಿ ||
ಶ್ರೀಯುಕ್ಕು ವಿರಕ್ತಿಯ ಊಪುವ |
ಜೀಯರುಪಾಧ್ಯಾಯರೆಮಗೆ ಮಾಡುಗೆ ಶುಭಮಂ ||೪||

ಒಸಗೆ ಮುನಿಸೆಂಬಿವೆರ(ಡಱ)ಡುಂ |
ದೆಸೆಗಳುಮಂ ಬಿಟ್ಟು ಮೋಕ್ಷಪ(ಗ)ತಿಯೆ ಶರಣೆಂ ||
ದೆಸೆವ ಮುನಿವರರನಾಂ ಬ |
ಣ್ಣಿಸುವೆಂ ಭಕ್ತಿಯೊಳೆ ಕರಣಶುದ್ಧತೆಯಿಂದಂ ||೫||

(ಯಕ್ಷ ಸ್ತುತಿ)

ಅಕ್ಷೂಣ ಸಾಹಸಂ (ಲಕ್ಷಣಂ) ವಟ |
ವೃಕ್ಷನಿವಾಸಂ ನಿಜೋದ್ಯನಕ್ಷೂಣ ಗುಣಂ ||
ಶಿಕ್ಷಿಸಲೆವದಡೆಲಕ್ಷಿತ |
ಲಕ್ಷಣನ ಕ್ಷೂಣ(ದ)ಯಕ್ಷ ನೀಗೆಮಗೊಳ್ಪಂ ||೬||

---

1 ರಟ್ಟಮತಂ, ಜೈನ ರಟ್ಟಮತ ಶಾಸ್ತ್ರ ಬರೆಯುವುದಕ್ಕೆ ಶುಭಮಸ್ತು, ಶೋಭನಮಸ್ತು, ನಿರ್ವಿಘ್ನಮಸ್ತು, ಆಯುರಾರೋಗ್ಯ ಐಶ್ವರ್ಯಮಸ್ತು – ಎಂದು ಓಲೆಯ ಪ್ರತಿಯ ಆದಿಯಲ್ಲಿದೆ. 2 ಸೌಖ್ಯವ ತುಷೆಯದಿಂ. 3 ದುರ್ಧರ. 4 ಆದಾ ದಾರ್ಯರನೆ. 5 ಯುಗಳ ಪೊದಳೆಯುಂ. 6 ವಿರಕ್ತಿಯನ್ನ.

(ಯಕ್ಷ ಸ್ತುತಿ)

ಕಂ|| ವಾರಣವೈರಿಯನೇಱಿ ಮ |
ಹಾರಣದೊಳ ಗುರ್ವಿಪ(ವ)ರ್ವ ತಾ(ಣಾ)ರಯ ಬಲದಿ(ಬ)ಂ ||
ಬೇರಿಂದೆ ಕಿಡಿಸಿ ಯಕ್ಷಕು |
ಮಾರಿ ಸದಾ ಕೂರ್ತು ರಕ್ಷಿಸುಗೆ ಬುಧ ಬಂಧೂ || ೭ ||

(ಸರಸ್ವತೀ ಸ್ತುತಿ)

ವೃತ್ತಕುಚಯುಗಳೆ ನಿಜಮುಹಿ |
ಮೋತ್ತಮೆ ಮೃದುಪಾದಯುಗಳೆ ವಾಗ್ವಧುವೆನ್ನೀ |
ಚಿತ್ತದೊಳೆ ನಿಂದು ಮಱೆಯು ||
ತ್ಪತ್ತಿಯ ಲಕ್ಷಣಮನೆಮಗೆ ಸೂಚಿ(ಕೆ)ಸು ದಯೆಯಿಂ || ೮ ||

ಶ್ರೀಮದ್ವ(ರ)ಂ ಜಿನವಂಶ ಶಿ |
(ರೋ)ಖಾಮಣಿ ಜಿನನಗರವಲ್ಲಭಂ ಭಾ(ರೆಲ)ರತಿಗಂ ||
ಕಾಮನಿಭಂ ಕಿಸುಗಂಣಂ |
ಭೀಮಬಳಂ ಕಾಡಮರಸ ನುಚಿತೋದಾ(ತಾಧಾ)ರಂ || ೯ ||

[1]ಚಾರುಂಮರಿಯಂ [2]ಕೇಳಿ|
ದ್ದಾರಿಯೆ ತಳ್ತಿಱಿದು ಮಾರಸಿಂಹನ (ಮತ) ಬೆಸದಿಂ ||
ಮಾಱುವರಿನೃಪರ [3]ಪಟ್ಟದ(ವ) ಸಂ |
ಹಾರಿಸಿ ಪರಬಲ ಕೃತಾಂತ ನೆನಿಸಿದನಾತಂ || ೧೦ ||

ಅರಸಾಳೆಂಬಿನಿತಲ್ಲದೆ |
ಸಿರಿಯೊಳ್ ವಿಕ್ರಮದೊಳುನ್ನತಿಕ್ಕೆಯೊಳೆಳೆಯಂ ||
ಪರಿರಕ್ಷಿಪೆಡೆಯೊಳವನೊಳ್ |
ದೊರೆಯಾರೆನೆ ಧರೆಗೆ ಕಾಡಮರಸಂ ನೆಗಲ್ದಂ || ೧೧ ||

ತಳಕಾಡ ಕೋಟೆಯಂ ಪ |
ಚ್ಚಳಿಯದೆ ಮುತ್ತಿರ್ದ ಚಕ್ರವರ್ತಿಯ ದಂಡಂ ||
ಕಳಕುಳಮಾಡಿದನದಟರ |
ಪೞವಿಗೆಯಂ ಮುಱಿದ ಬಱಿಕನಂಬಂಗೊಂದಂ || ೧೨ ||

ಅಂತಿರೆ ಪನ್ನಿರ್ಬರ್ ಸಾ |
ಮಂತರುಮಂ ಗೆಲ್ದು ಕಾಡಮರಸಂಗರಸಂ ||
ಸಂತಸದಿಂ ಬಾಳುರ್ಚಿದ |
ದಂತಿಪ್ಪರ್ತ್ತಯ್ದು ಬಾಡಮಂ ದಯೆಗೆಯ್ದಂ || ೧೩ ||

---

1 ಬಾರೆಂದು. 2 ನಿಳೆದರಿಯೆ. 3 ಪಟವ ಹಾರಿಸಿ.

ಚಂ|| ಎನಿಸಿದ ಕಾಡನೆಂಬರಸನಗ್ರಸುತಂ ಪ್ರಭುಚೋರನಾಕ(ದ)ನಾ |
ತನ ತನುಜಾತನಾಯಕನವಂಗೆ ಶುಭಾಕರನಾತ್ಮಸೂನು ತ ||
ತ್ರನಯನುದಾರಿ ದಾವನವನಾತ್ಮಭವಂ ಶಿವಮಾರಿದೇವನಾ |
ತನ ತನಯಂ ಜನಾರ್ದನ ನವಂಗೆಐ(ಐಯ)ಗಂಗನೆ ಜ್ಯೇಷ್ಠನಂದನಂ || ೧೪ ||

ಕಂ|| ಎಐಯ(ಂಗ)ಪ್ಪನಂದನಂ ಪೇ |
ಅಱಯದ ಕಲಿ ವಿಕ್ರಮಾರ್ಯನಾತನ ತನಯಂ ||
ಮರಿವೊಕ್ಕರರಕ್ಷಿಪ ಕೃತ |
ಮೆಱವಂ ಧರಿಯೊಳಗೆ ಕಾಡಮರಸಂ ವೀರಂ || ೧೫ ||

ಅಂತೆನಿಪ ಕಾಡುಮರಸನ |
ಸಂತತಿಯೊಳ್ ಕುಂಚನೆಸೆದನಾತನ ತನಯಂ ||
ಕಂತುವಿನ ರೂಪಯುಕ್ತನ |
ನಂತಗುಣೋಪೇತನವನ ತನಯಂ ಮಾಚಂ || ೧೬ ||

ದೋರಯ್ಯನವನ ತನಯಂ |
ತಾರಯ್ಯನವಂಗೆ ತನಯನಾತನ ತನಯಂ ||
ಧೀರಂ ನಾಗಕುಮಾರಂ |
ಶ್ರೀರಾಮಂ ಚಿಕ್ಕಪಯ್ಯನಾತನ ತನಯಂ || ೧೭ ||

ಸಲೆ ನಾಲ್ವತ್ತೊಂದೊಕ್ಕಲ |
ಕುಲಕೆಲ್ಲಂ ತಿಲಕನಾಗಿ ಧಾತ್ರಿಗೆ ನೆಗಱ್ದಂ ||
ಕಲಿ ಚಿಕ್ಕಪಯ್ಯನತಿ ನಿ |
ರ್ಮಲ ಭಾರದ್ವಾಜಗೋತ್ರನದ್ಭುತಚರಿತಂ || ೧೮ ||

ಚಂ|| ಅವನ ತನೂಭವಂ ದಿನಪನಂದನನಾದಿವಿಜೇಂದ್ರಪುತ್ರನಾ |
ಪವನಜನಂದ(ನಾಂಜ)ನೇಯನದೀತನಯಂಗೆ ಮಹೋನ್ನತಿಕ್ಕೆಯೊಳ್ ||
ಪ್ರವಿಮಲಕೀರ್ತಿಯಂ ತಳೆದನೆಂಬ ನೆಗಱ್ತೆಯ ಕುಂಚತೇಜನಾ |
ಮವರ ಶುಭಾಕರಂ ಪ್ರಭುಗಳೊಳ್ ಪೊಗಱ್ಗಂ ಜಯಬಂಧುಸಜ್ಜನಂ || ೧೯ ||

ಕಂ|| ಗಂಗರಮನೆಯೊಳ್ ವಿಶ್ವಾ |
ಸಂಗಳ ಬೆಸತೆಗೆ ತಾನೆ ಮೊದಲಿಗನೆನೆ ಶಾ ||
ಸ್ತ್ರಂಗಳೊಳತಿಪರಿಣತನೆನೆ |
ಸಂಗತಗುಣದೊಳ್ ನೆಗಱ್ತೆಯಂ ತಳೆದವರ್ಗಳ್ || ೨೦ ||

ನಾಗಕುಮಾರನ ನಂದನ |
ನಾಗಮಕೋವಿದನುದಾರಚಿಂತಾಮಣಿ ವಾಕ್ ||
ಶ್ರೀ(ಚ್ಛ್ರೀ)ಗೆ ನೆಲೆಯೆನಿಸಿದಂ ಭೂ |
ಭಾಗದೊಳಭಿಮಾನಜಲಧಿ ಸುಕವಿನಿದಾನಂ || ೨೧ ||

## ರಟ್ಟಶಾಸ್ತ್ರಂ

ಕಂ|| ಜಲಜಭವ ಜಲರುಹೋದರ |
ಜಲಜಾತಾರಿಜೂಟಮುನಿಯೆನೆ ವಂದ್ಯಂ ||
ಘಳಿಯಮ್ರ್ಮಂ ಜಸವಯ್ಯಂ |
ಕುಲತಿಲಕಂ ಮಾಚಪುಯ್ಯನೆಂಬೀ ಪ್ರಭುಗಳ್ || ೨೨ ||

ಜನಕನುಂರಾಗದೆ ನೆಗಟ್ದಂ |
ಜನನುತಗುಣಿ ವಿತತಕೀರ್ತಿರಮಣೀರಮಣಂ ||
ಮನಸಿಜಸನ್ನಿಭನೆನಿಸಿದ |
ವಿನಯಗುಣೋತ್ತುಂಗನೆಸೆವ ರಟ್ಟವೆಡಂಗಂ || ೨೩ ||

ಗುಣಪಕ್ಷಪಾತಿ ಭೂತುಗ |
ನಣುಗಂ ವಿನಯಾಂಬುರಾಶಿ ಸುಕವಿನಿದಾನಂ ||
ಪ್ರಣುತಜನಭಕ್ತರೊಳ್ಪಿನ |
ಕಣಿ ನಿರ್ಮಲಕೀರ್ತಿನೇಮಿ ಪುಸಿವರಶೂಲಂ || ೨೪ ||

ಎಂಬ ಪೆಸರಿಸೆಯೆ ನೆಗಟ್ದಿಭ |
ಯಾಂಬುಧಿ ನಿಜಸುತೆಗೆ ಚಂದ್ರಲೇಖೆಗೆ ಮೇಘಾ ||
ಡಂಬರಮನತಿಶಯೋಕ್ತಿಯಿ |
ನಿಂಬಾಗಿರೆ ತಿಳಿಯೆ ಪೇಟ್ದಿಹಂ ಕನ್ನಡದಿಂ || ೨೫ ||

## ಗ್ರಂಥಾರಂಭಂ

ಕಂ|| ಧರೆ ಬಣ್ಣಿಸೆ ಮೇಘಾಡಂ |
ಬರ[1]ದೊಳ್ ವಿರಚಿಸಿದ ಮೞೆಯ ಕುಱು[2]ಂಪಂ ನಿಚ್ಚಂ||
ಪರಿವಿಡಿಯಿಂ ದಾಸ್ಥ[3]ಯೊಳಂ |
ಪರೀಕ್ಷಿಸಲ್ ಬಲ್ಲೊಡವನ [4]ಪೇಟ್ದುದೆ ತಥ್ಯಂ || ೨೬ ||

ಎನಗೀಶಾಸ್ತ್ರಂ ಪಾಠಂ |
ಜನರಂಜನಮಾಡಿ ಪೇಟ್ದು ಕಱಿವೆಂ ಪೊಟ್ತುಂ ||
ನೆನೆಯುನವರೊಳಗನೆಂಬಗ್ಗ |
ಳ ನೆನಿ(ಂ)ತುಂ ಚಪಳನೆಂಬ ರೊಳ್ಳಿದ್[5]ನೆಂಬರ್ || ೨೭ ||

ಇಳೆಯೊಳ್ ಸ್ಥಾವರ ಜಂಗಮ |
ಮೞೆಯಲ್ಲದೆ ಬೆಳೆರ್ತಿರ್ಕುಮದುಕಾರಣದಿಂ ||
ಮೞೆಯನಱಿವಂತೆ ಪೇಟ್ದಂ |
ಮೞೆಯಂದವ ಪೊಸತುಮಾಡಿ ಕನ್ನಡದಿಂದಂ || ೨೮ ||

---

1 ಮೊದಲ. 2 ಲಗಳಂ ನಿಂ. 3 ಸ್ಥಿತಿಯೊಳ್. 4 ಯಿಳೆಗಾರಾಧ್ಯಂ. 5 ರೆನ್ನರ್.

ಕಂ|| [1]ಅದಱಿಂ ಶ್ರೀಯುಂ ಪೆಂಪುಂ |
ಚದುರುಂ ಬಿನ್ನಣಮು ಮ[2]ಂಕಮುಂ ಗಾ[3]ದಗಮುಂ ||
ಕದನಂ ಕಳವುಂ ಪ್ರಜೆಗಳ್ |
[4]ಮಯುದದಿಂ ಮೞೆಯಿಂದೆ ಪೆರ್ಚುಗುಂ ವಸುಮತಿಯೊಳ್ || ೨೯ ||

ಆದಱಿಂ ಧಾನ್ಯಚಯಂ ಬೆಳೆ |
ವುದನಱಿ[5]ವೊಡೆ ಮೞೆಯನಱಿದು ಪೇೞ್ವುದು ಮತ್ತಂ ||
ತೊದಳಿಲ್ಲದೆ ಕಲಿವು(ಲ್ವು)ದು ಪೇ |
ೞ್ವುದು ನೆಟ್ಟನೆ ಬಿಟ್ಟನೆಂದ ಸೂತ್ರಕ್ರಮದಿಂ || ೩೦ ||

ಸ್ವೇದಜ ಮಂಡಜ [6]ಮುರ್ವಿಜ |
ಮಾದರದ ಜರಾಯುಜಂಗಳೆನಿಸಿದ ನಾಲ್ಕುಂ ||
ಭೇದದ ಸತ್ವೋತ್ಪತ್ತಿಗೆ |
ಮೇದಿನಿ ಜಲ ಮರ್ಕರಶ್ಮಿ ಪವನಂ ಮುಖ್ಯಂ || ೩೧ ||

ಖರಕರನ ತಾಪದಿಂದಂ |
ಧರಣಿತಳಂ ಬೇಡೆವಿಟ್ಟು ತಾಪದೊಳಂ ಭೋ ||
ರ್ಗರೆದು ಮೞೆ ಕಱೆ(ಗು)ಯೆ ವಿಶ್ವಂ |
ಭರೆ ಬೆಳೆಗುಂ ಮನಕೆವಂದ ಧಾನ್ಯ[7]ವ್ರಜಮಂ || ೩೨ ||

ಎಂದು ಪುರಾಣಾಚಾರ್ಯರ |
ನಿಂದಿತ ಗುಣರಱಿಯೆ ಪೇೞ್ದ ಮೞೆಗಳ ಕುಱುಪಂ ||
ಚಂದಿರ(ದಯ) ಭಟ್ಟರ ದಯೆಯಿಂ |
[8]ಸಂದೆಯ ಮಣವಿಲ್ಲದಂತು ಕಲಿವು(ಲ್ವು)ದು ಮೞೆಯಂ || ೩೩ ||

ಅತಿಶಯರತ್ನೋಜ್ವಲ ಸಂ[9] |
ಕೃತಿ(ಹಿತೆ)ಯೊಳ್ ಧನಕೀರ್ತಿಯೊಳ್ ವರಾಹಮಿಹಿರ ||
ಸ್ಮೃತಿಯೊಳ್ ಗಾರ್ಗ್ಯಾಚಾರ್ಯರ |
ಮತದೊಳ್ ಸಲೆ ಮೇಘಮಾಲೆಯ(ನ)ನುನಯದಿಂದಂ || ೩೪ ||

[10]ಎಸೆವ ಮೞೆಗಾಲವಂ ಜೋ |
ಯಿಸ ಚಕ್ರಿಯೊಳುದಿತಕೀರ್ತಿನಾರಾಯಣನೊಳ್ ||
ವಿಸುಪ ಶಕುನಂಗಳೊಳ್ ಭಾ |
ವಿಸಿ [11]ಪೇೞ್ದಂ ಮೞೆಯ ಕುಱುಪನೊಲ್ಪಿನ [12]ಬಿಟ್ಟಂ || ೩೫ ||

---

1 ಅದಱಿಂದಾಯುಂ ಶ್ರೀಯುಂ ಪೆಂಪುಂ...... 2 ಮಹಿಮೆಯುಂ ಗಾವಳಮುಂ. 3 ವರ. 4 ಮುದಂದಂ ಮೞೆಗಳಿಂದೆ ಪೆರ್ಚುಗು ಧರೆಯೊಳ್ 5 ವೊಡೆಯು ಮೞೆಯನಱಿವುದು ಮತ್ತಂ। 6 ಬೀಜದ ಧಾನ್ಯಂ ಬೆಳೆಗುಂ. 8 ಸಂದೇಹಮುವಿಲ್ಲದಂತು. 9 ಸಂಹೃತಿ-ಸಂಸ್ಕೃತಿ 10 ಎಸೆವಮೂಳಾರದೊಳ್ ಸೆವ ಮೞೆ ಬಿಟ್ಟನೊಳ್ ಜೋ. 11 ಪೇೞ್ವುದು. 12 ಬಿಟ್ಟು.

ಮ || ಪರಿವೇಷಂ ಮಱೆ ಮಿಂಚು ಗಾಳಿ [1]ಜಳದಂ ಶೀತಂ ಬಿಸಿ[2]ಲ್ ನೀರ್ಗದಿರ್ |
ಶರದಂ ಘರ್ಜನೆಯೆಂಬ ಪತ್ತು ತೆಱದಿಂದಂ ಧಾತುಗಳ್ ಧಾತ್ರಿಯೊಳ್ ||
ವರುಸೊ(ಷೊ)ತ್ಪತ್ತಿಯನೆಯ್ದೆ ಪೇೞ್ವುದ[3]ದಱಿಂ ನೈಮಿತ್ತಿಕಂ ಧಾತುವಂ |
[4]ಸ್ಥಿರಮಾರಯ್ದುಱದೊಲ್ದು ಪೇೞ್ದ(ೞ್ಗೆ)ನಯದಿಂ ಬಲ್ಲರ್ ಮನಂಗೊಳ್ಪಿನಂ|| ೩೬ ||

## ದೂತಲಕ್ಷಣಂ

ವ|| ದೂತಲಕ್ಷಣಮುಂ ಪೇೞ್ವಂ—

ಕಂ|| ಕುಸುಮಾಕ್ಷತ ಫಲಹಸ್ತಂ |
ಪ್ರಸನ್ನಚಿತ್ತಂ ವ(ನ)ಯೋತ್ತಮ(ರ)ಂ ಕಲ್ಪಾಂಗಂ ||
ಹಸಿತವದನಂ ನಯೋಕ್ತಂ |
ಬೆಸಗೊಂಡಂದಕ್ಕು ಮಱೆಯುಮಿದುವೊಂದು ಮತಂ || ೩೭ ||

ತಳೆ(ಳ)ಯಿಂದ ಮಿಱಿದು[5] ಕೊಡೆಯಿಂ |
ನೆಟಿಲಾಗಿರೆ ಪಿಡಿದು ನೆಲಲನೀಕ್ಷಿಸೆ ನೀರೊಳ್ ||
ನೆಟಿಲದೆ ಸೆಗ(ಗೆ)ರ್ದು ಬೆಸಗೊಳೆ |
ಮಱೆಯಕ್ಕುಂ ಪಾದರಕ್ಷೆಯುಂ[6] ಪಿಡಿದಿರೆಯುಂ || ೩೮ ||

ಇಱಿಯೆ ಮುಸುಕಿಟ್ಟು ಬಾಗಿಲ |
ಬಱಿಯನೆ ಪರಿತಂದು ದಾ(ದ)ಂಟೆ ನೂರಿ(ಱ)ಸಿರೊ(ರೆ)ಜಂ |
[7]ಬಿಡದೆ ನಡುಗುತ್ತುಮೊಯ್ಯನೆ |
ಮಱೆಯಂ ಬೆಸಗೊಂಡೊಡಕ್ಕುಮಿದುವೊಂದು ಮತಂ || ೩೯ ||

ಮಱೆಯಂ ಬೆಸಗೊಳ್ವಾಗಳ್ |
ಮಱೆಯಾಕೃತಿ ಬೇಱೆ ತೋರ್ಪೊಡಂ ನೀರ್ಗೊಡನಂ ||
ಘ(ಗ)ಳಿಘ(ಗ)ಳಿಸಿ ಸುರಿವೊಡಂ ಸಲೆ |
ಪಿಱಿಯದ ಸೀರೆಯನೆ ಪಿಡಿದು ಒ(ತ)ರೆ ಮಱೆಯುಕ್ಕಂ || ೪೦ ||

[8]ಪಸಿಯೆಲೆಕಾಯ್ ಪುಲ್ ಮಾಂಸಂ |
ಪೊಸಪೂವಂ ಬೆಲ್ಲಸರ್ಕರೆಗಳಿವುಮಂ ತಾಂ ||
ಬೆಸಗೊಳ್ವಂ[9] ಪಿಡಿದಿರೆಯುಂ |
ಪ್ರಸನ್ನರಾಯೆಡೆಗೆ [10]ಬರ್ಪೊಡೊಳ್ಮಱೆಯಕ್ಕುಂ || ೪೧ ||

---

1 ಜಳಜಂ, ಜಳಹಂ. 2 ಲರ್ಗದಿರುಸುರದಿಂ ಗರ್ಜನಿಯುಂ ಬಿತ್ತು, ಸಿಲೀರ್ಗದೀರ್ಘರದಂ. 3 ಱುಮದಱಿ. 4 ಕರಮಾರ್ಯ್ದರಣರಿದುವ ಪೇೞ್ಗೆ. 5 ನೋಡಿಯು 6 ಬಿಡುವಾಕ್ಷಣದಿಂ, ಪಿಡಿದಿರಲುಂ. 7 ಬಿಳದೆ 8 ವಸಿಯರೆ ಪುಲ್ಲುಮಾಂಪ ತಿಲಮುಪ್ಪುವನರುಹಂ ಸಮಾಂ, ಪ್ರಸರಂ ತಿಲಮುಪ್ಪುವನರುಹಂ ಸರ್ಕರೆಯುಂ. 9 ಳ್ವರ್ ಪಿಡಿದಿರೆ. 10 ಬಪ್ಪದೊಳು, ಒಪ್ಪಡೊಳು,

ಕಂ|| ಬೆಸ[1]ಗೊಳ್ವವಂದಿರ್ದೆಡೆಯೊಳ |
ಗೆಸೆದಿರ್ದೊಡಮಿಂದ್ರಚಾಪಮರ್ಕೇಂದುಗಳಂ ||
ಮಸಗಿ(ಯೆ) ಪಣಿ ಕೊಳ್ವೊಡೆಯುಂ |
ಕುಸುಮಾಸ್ತ್ರನ ಚಾ[2]ಪಮೆಸೆವೊಡೊಳ್ಕಱೆಯಕ್ಕುಂ || ೪೨ ||

[3]ಅನಲನ ಕಾಲನ ಪವನನ |
ದನುಜನ ದೆಸೆಯತ್ತಮಿರ್ದು ತೃಣಮಂ ಮುಱಿದುಂ ||
ಮನಮಿಕ್ಕಿಯೆ ಬೆಳ್ಮೊಗದಿಂ |
ತನುವಂ ತೆಱೆದಿರ್ದ ದೂತನಿಂ ಮಱೆ ಬಱ(ಱೆ)ಗುಂ || ೪೩ ||

ಅಸಿ ಮಷಿ ಕುಶಿ(ಷು) ಪಿಡಿ ಪಿಡಿಕಲ್ |
ಕುಸಿಯುಂ ಪುರಿಯೋಡು ಕೋಡು ಕಾವಲಿ ಸುಲಿಯಂ ||
[4]ಬೆಸಗೊಂಬರ್ ಪಿಡಿದಿರೆಯುಂ |
ಪುಸಿವರಶೂಲಂ ಜಗಕ್ಕೆ ಮಱೆಯಿಲ್ಲೆಂದಂ || ೪೪ ||

ಚಂ|| ಕೆಱೆ ತೊಱೆ ಬಾವಿ ಬೆಂಚೆ ಡೊಣೆ ದೀರ್ಘಿಕೆ ಕರ್ಮಡು ಪಳ್ಳಕೊಳ್ಳ ನೀ |
ರೊಱೆವ ಕೊಳಂ ಪಸುರ್ತ್ತ ಗಿಡು ಪಾಳ್ಮರನೆಂಬಿವಱಲ್ಲಿ ನಿಂದು ತಾಂ ||
ಬಱ[5]ಕಗಿದಾಗ ಬಟ್ಕ ಮಱೆ ಕೊಳ್ಗಮೊ ಕೊಳ್ಳದೊ ಪೇೞಿಮೆಂದೊಡಾ |
ಕುಱಿಪನೆ ನೋಡಿ ಪೇೞ್ ಮಱೆಯನುತ್ತಮಮಧ್ಯಕನಿಷ್ಠ[6]ಮೆಂಬುದಂ || ೪೫ ||

ಉ|| ಗುಯ್ಯಲನೆಯ್ದೆ ತೋಡುತಿರೆ ನೀರನ(ನು)ಗುೞ್ತ್ತಿರೆ [7]ಮೀಯೆ ಕಾಲುಮಂ |
ಕೆಯ್ಯುಮನೊತ್ತಿ ಕರ್ಚುತಿರೆ ತೊಟ್ಟನೆ ಮೂತ್ರಿಸೆ ವಾರಿಯಂತ್ರದಿಂ ||
ದೊಯ್ಯನೆ ನೀರನೆ(ನೊ)ತ್ತಿ ಕೆಸಱಿಂ ತುೞಿಯುತ್ತಿರೆ ಕಂಡು ಪೇೞ್ಗೆ(ಳ)ಱ |
ಟ್ಟಯ್ಯನ ಪೇೞ್ದ ಮಾೞ್ಕೆಯೊಳೆ [8]ಪೃಚ್ಛಕ ನೀಂ ಮಱೆ ಸತ್ಯಮೆಂಬುದಂ || ೪೬ ||

—ದೂತ(ಪೃಚ್ಛಕ) ಲಕ್ಷಣಂ ಸಮಾಪ್ತಂ—

ಇಂತು ಪ್ರಥಮಾಧ್ಯಾಯಂ

**ಪೀಠಿಕಾಪ್ರಕರಣಂ**

---

1 ಗೊಳ್ವಿಂದಿರ್ದೆಸೆ. 2 ಪ ಮಾಣೆವೊ. 3 ಅನಲನ ಪವನನ ದನುಜನ । ಇನದೆಸೆಯಂ ಕಿತ್ತಲಿರ್ದು ದಕ್ಕುಂ ಮುರಿದುಂ. 4 ಬೇಗೊಳ್ಳಬಾಪರ್ಕರ್...ಪುಸಿವದು ಸೂಲಜಿಸ. 5 ಬಱಕಗಿದಟ್ಕಿ ಬಟ್ಕೆ...ಕೊಳ್ಳದೊಯಲ್ಲಿಯಾದೊಡಂ. 6 ಮಂಬಿನಂ. 7 ಮಯ್ಯ. 8 ವೃಶ್ಚಿಕನಿಂ ಮಳೆ, ತಥ್ಯದಿನಿಂ ತುಳೆ.

* ಒಂದು ಪ್ರತಿಯಲ್ಲಿ ಇಲ್ಲಿಗೆ ಪದ್ಯ ೪೪ ಎಂದಿದೆ.

# ಆಕಸ್ಮಿಕಾಧ್ಯಾಯಂ ದ್ವಿತೀಯಂ ೨

ವ|| ಆಕಸ್ಮಿಕಾಧ್ಯಾಯಮಂ ಪೇೞ್ವೆಂ—

ರಗಳೆ|| [1]ಮಸೆದ ಕೆಯ್ದುಗಳ್ ತುಕ್ಕು(ಳ್ಪು)ಗೊಳ್ವೊಡಂ-ಮ[ನೆಯು]ನೇಱು ಶುನಕಂಗಳೂಳ್ವೊಡಂ ||
ಲವಣ(ಭಾ)ಭಾಂಡಂಗಳೊಸರ್ದು ಮಪ್ಪೊಡಂ – ಬೆಲ್ಲತುಂಬಿದ ಭಾಂಡ ದ್ರವಿ[2]ಪ್ಪೊಡಂ ||
ಕಳಸದೊಳ್ ತಗುಣೆ ಮೊಱೆಯುತಿರ್ಪೊಡಂ-ಸಿಸುಗಳೆಲ್ಲ(ಂ)ರು ಕೇಱಿಗಟ್ಟಿ ನಲಿವೊಡಂ ||
ಜೀವ[4]ದನಗಳ ನೊಱನೂಱು ಕಡಿವೊಡಂ – ಪಕ್ಷಿಜಾತಿ ಪುಡಿಯೊಳ್ ಪೊರಳ್ವೊಡಂ ||
[5]ಕೆಱೆತೊಱೆಗಳೊಳಗೆ ನಾಯ್ ಬಗುೞ್ವೊಡಂ–ಬಳ್ಳಿಗಳ ಕುಡಿ ನಭಕ್ಕೆ ಮಿಳಿರ್ವೊಡಂ ||
ಕುೞಿಗಳೊಳಗೊಱತು ನೀರ್ ಬರ್ಪೊಡಂ–[6]ಬೆಕ್ಕು ಮೊಱೆದು ಪಣೆವೊರಸುತಿರ್ಪೊಡಂ ||
ಪಲವು ನೀರ್ಗದಿರ್ ಮಸಗಿ ನೆಗೆಯುತ್ತುಮಿರ್ಪೊಡಂ–[7]ಪೊನ್ನಣಂ ಮಸಗಿ ಕಡಿಯುತಿರ್ಪೊಡಂ
ಪಲವು ಮುಳ್ಳಾ(ಳ್ಕಾ)ತತಿ ಪಾಱುತಿರ್ಪೊಡಂ –ಪಕ್ಷಿಮಾಳೆಯಲ್ಲಿ (ಯೊಳೆ) ಕೊರಡು
[8]ಮೂಡುವೊಡಂ ||
ಗಾಳಿ ಸುೞಿದು ಸುಟ್ಟುಱಿಗಳೊಗೆವೊಡಂ–ಕೊಡತಿವುೞುಗಳ(ಱ)ೞಿದಾಡುತಿರ್ಪೊಡಂ ||
ಕರಗಮಂ ಮುಸುಱ ಗುಂಗುಱುಗಳಿರ್ಪೊಡಂ – [9]ವಾಯಸದ ತತ್ತಿ ಗಗನಕ್ಕೆ ಮಿದಿರ್ಪೊಡಂ||
ಸಲೆಮಹಾಮೇಘ ಮೊಗೆದು ತೋರ್ಪೊಡಂ – ನರರ್ಗೆ ಬಱಿದೆ ಬಹುಮೂತ್ರಮಪ್ಪೊಡಂ ||
ಸೋಗೆ ನವಿಲ್ಗಳ್ [10]ಕೇಗುತಿರ್ಪೊಡಂ – [ಕೆಳಕೆಳಗೆ ಕೆಸಱುಪ್ಪು ನೆಗೞ್ವೊಡಂ ||]
ಸಂಜೆಯೆರಡಱೊಳು ಮಂಜು ನೆಗೆವೊಡಂ [11]ಬಯಲುದ್ದದಲ್ಲಿ ಕಪ್ಪೆಗಳ್ ನೆಗೆವೊಡಂ ||
ಭುಜಗ ಸಂಕುಳಂ ಮರನನಡರ್ವೊಡಂ – ಪಶುಗಳೊತ್ತರಿಸಿ ಮಱಿ(ಱಿ)ಗೆ ಪರಿವೊಡಂ||
ಪೊಳೆದು ಪಾಱು ಮೀರ್ಗ ತಡಿಗೆ ಬರ್ಪೊಡಂ – ದಿನಕರೋದಯದೊಳಪರಭಾಗದೊಳ್ ||
ಪಡುವ ದಿನಪನಿರೆ ಪೂರ್ವಭಾಗದೊಳ್ - ವಿಜಯಚಾಪವೊಗೆದೊ[12]ಪ್ಪಿ ತೋರ್ಪೊಡಂ||
ನೀರೊ[13]ಳಲ್ಲಲ್ಲಿ ಸವಿಗೆಟ್ಟು ತೋರ್ಪೊಡಂ–ಕರ್ಗಿಕೊಂಡು ಮೇಣ್ ಕೆಂಪನಡರ್ದು ಮೇಣ್ ||
ಸವಳದಕ್ಕೆ ಮೇಣ್ ಬೈಗೆಯಕ್ಕೆ ಮೇಣ್ – ಪಂತಿಗಟ್ಟಿರೆ ವಿಮಾನದಂತೆ ಮೇಣ್ ||
ಪಡುವಲೊಗೆದು ಭೋರ್ಗರೆದು ಪರಿಯೆ ಮೇಣ್–ಪಡುವಲೊಗೆದು ಮೂಡಣ್ಗೆ ಬರ್ಪೊಡಂ ||
ಪರ್ವತದವೋಲ್ ಮೇಘಮೊಡ್ಡಿ ತೋರ್ಪೊಡಂ – (ಪರ್ವತದವೋಲ್ ಮೇಘವೊಡ್ಡಿ ತಾಂ
ತೋರ್ಪೊಡಂ ||)
ಜಲಚರಂಗಳ ಮೊಟ್ಟೆಯಿಂದಲ್ಲಿ ತೋರ್ಪೊಡಂ – ಧಾರಿಣೀತಳಕ್ಕೆ ಪೊಗೆ ಮೇಣ್ ||
ಮೇಘನಿವಹಂ ತಾಮಿಂತೊಪ್ಪಿ ತೋರ್ಪೊಡಂ – ಪಡುವಲೊಗೆದು ಮೂಡಣ್ಗೆ ಬರ್ಪೊಡಂ ||

---

1 ಮಸೆದ, ಸಮೆದ. 2 ಸೆಯುಂ. 3 ಳೊಸೆದು. 4 ದನಮನುರೆನೊಣ. 5 ಕೆರೆಯುತೊರೆಯೆಡೆಗಳಿ. 6 ಬೆಕ್ಕುಗ್ಗುವದು ಫಣೆಯ ಪಡುತಿಪ್ಪಡಂ. 7 ನೊಣ. 8 ನೆಗೆವೊಡಂ. 9 ವಾಯುಸಂತತಿ ಗಗನಮುಪ್ಪಡಂ. 10 ಕೂತೇಂಕು. 11 ಕೆಲಕೆಲ ಕೆಸಿಮುಪ್ಪ. 12 ಗೊಪ್ಪುಪೊಡೆ. 13 ನೀರೊಳಾದ ಸವಿಗೆಟ್ಟು.

ಮೂಡಲೊಗೆದು ಪಡುವಣ್ಗೆ ಬರ್ಪೊಡಂ – ಪಿಂಡುಗಟ್ಟಿ ನಲಿದೋ(ದಾ)ಡುತಿರ್ಪೊಡಂ ||
[ತೆಂಕಣೊಗೆದು ಬಡಗಣ್ಗೆ ಬರ್ಪೊಡಂ – ಬಡಗಲೊಗೆದು ತೆಂಕಣ್ಗೆ ಬರ್ಪೊಡಂ ||
ಹರನೊಳೊಗೆದು ನೈಋತಿಗೆ ಬರ್ಪೊಡಂ – ಪೊಗೆಯುಲೊಗೆದನಿಲಂಗೆ ಬರ್ಪೊಡಂ ||]
ಪತ್ತು ಧಾತುಗಳ ತೋಱುತಿರ್ಪೊಡಂ – ಪುರವರಕೆ ಸಲೆ ಸಾರೆಯಾಗಿಯುಂ |
ದೀಪ್ತಮಲ್ಲದೆ ಸುಶಾಂತಮಾಗಿಯುಂ – ಮೃಗಶಕುಂತಿ ಬಿಡದೂಳುತಿರ್ಪೊಡಂ ||
ಸಂಜೆಯೊಳೆ ಸಯುಮನಿತ್ತು ತೋರ್ಪೊಡಂ – ಬೆಕ್ಕು ಮೊಲನೆರಳೆ [1]ಹುಲಿಭುಜಂಗಮಂ |
ನರಿ ಭುಜಂಗ ನಿಲಿ ಕೊಂಕನೋತಿಯುಂ – ಗೋಱವೆರಸು ಸಾರಂಗನಿವಹಮುಂ ||
ಮತ್ತೆಯೊಪ್ಪುವ ಅನೇಕ ಮೃಗಜಾತಿಯುಂ – [2]ಪುಲಿಯಕ್ಕೆಲು ಕುಕ್ಕುಱಿಸಿ ನಲಿವೊಡಂ |
[3]ಇಱುಂಪೆ ತತ್ತಿಯುಂ ದೇವತಾಣಕ್ಕೆ ಪೊಯ್ಯೆಯುಂ – [4]ಇವನೋಡಿ ಪೇೞ್ ಮಱೆ
ಯಧಿಕತಾನೆಂಬುದಂ |
ತಪ್ಪದೆಯು ಕಲಿತುಕೊಳ್ ಱಟ್ಟೆಯ್ಯನಿಷ್ಟದಿಂ || ೧ ||

ಶಾ|| ಎಂತಕ್ಕುಂ ಮಱೆಯೆಂದು ಚಿಂತಿಪೆಡೆಯೊಳ್ [5]ನೀರ್ವಕ್ಕಿಯುಂ ಕಪ್ಪೆಯುಂ |
ದಂತಿವ್ರಾತಮು ಮಾಱೆ (ನೋಡೆ) ನೀರ ಕೊಡದಿಂ ನೀಸರ್ೞಸೆ ಮೇಣಱ್ತಿಯಿಂ ||
ಸಂತಂ ಪೊಣ್ಮಿರೆ ಪೆರ್ಚೆ (ಪಂಚ) ತೂರ್ಯ[6]ನಿನದಂ ತತ್ಕಾಲದೊಳ್ ಕಂಡೊಡಂ |
ಭ್ರಾಂತೇಂ ತಪ್ಪದು [7]ಸದ್ಯವೃಷ್ಟಿ ಯಿದುವೊಂದಾಕಸ್ಮಿಕಂ ಱಟ್ಟೆಗಾ || ೨ ||
(ಆಕಸ್ಮಿಕಾಧ್ಯಾಯಂ)

ಇಂತು ಆಕಸ್ಮಿಕಾಧ್ಯಾಯಂ ದ್ವಿತೀಯಂ ೨ ಸಮಾಪ್ತಂ.

---

1 ಹುಲಿಹುಲ್ಲೆಯುಂ ಪಾವೆಯುಂ. 2 ಪುಲಿಯಕ್ಕಲು ಬರತಕ್ಕ ಮರನೇಱೆಯೆಂ, ಪೆಲೆಗಳಂ ತಿನುತ ವಿರ್ಪೊಡಾ ಪುಲಿ.ಬೆಕ್ಕು ಪಕ್ಷಿ ಪೊಡಗಿಯು. 3 ಯವೊಲು ತತ್ತಿಯಂ ತೆವಱೊಳಿರೆ ಯಿರುತಿಪ್ಪೆಯುಂ, ಕ್ಕಿ ಅಱಿಪೆಯುಂ. 4 ಮಱೆಗಳಕ್ಕು ಮಿಂತಪ್ಪಕುಱಿಪಿನಿಂ–ನೆಱೆಯೆ ಕಲಿತುಕೊಳ್ ಱಟ್ಟನಿಷ್ಟದಿಂ – ಶಾಂತಿನಥಾಯನಮಃ—ಆಕಸ್ಮಿಕ ಶಕುನತ್ರಯಂ. 5 ಪೆರ್ವಕ್ಕಿಯುಂ, ನೀರ್ವಕ್ಕಿಯುಂ ಕಪ್ಪೆಯಿಂದಲೆ ಭ್ರಾಂತಮೂಳೆ, ದಂತಿವ್ರಾತಮುಂ ನೀರೊಳ್ ನೀಸರ್ೞಸಿ. 6 ಪೊಣ್ಮುತಿರೆ ಪೆಂಚೆ ತೂರ್ಯರವದಿಂ. 7 ಸತ್ಯ ವೃಷ್ಟಿ ಮಿದುವೊಂದು ತಕ್ಷೀಗ ರಟ್ಟೆಗಾ – ತಪ್ಪದು ಸಾಧ್ಯವೃಷ್ಟಿಮಿದು.

# ಶಕುನಾಧ್ಯಾಯಂ ತೃತೀಯಂ ೩

## ಶಕುನತ್ರಯಂ

ಇನ್ನು ಶಕುನಾಧ್ಯಾಯಮಂ ಪೇೞ್ವೆಂ—

### ೧. ಪಿಂಗಲಿಯ ಶಕುನಂ

ರಗಳೆ|| ಪಿಂಗಲಿಯನರ್ಚಿಸುಗೆ – ಪೋದಗೆಯನರ್ಚಿಸುಗೆ |
ಮಂಡಲ(ಲಿಯ)ಮನರ್ಚಿಸುಗೆ – ಕಾರ್ಯಮ(ನವ)ಂ ಚರ್ಚಿಸುಗೆ ||
ಬಱಿದು(ದೆ) ಬಾಯ್ಗೊಂಡೊಡಂ – ಮಱೆಗೊಂಡು ನಿಂದೊಡಂ |
ಮರನನಿೞಿತರ್ಪೊಡಂ – ಬಲಗೊಂಡು ನಿಂದೊಡಂ |
ಮೂತ್ರಿಸುತುಮಿರ್ಪೊಡಂ – ಶುಭಚೇಷ್ಟೆ ತೋರ್ಪೊಡಂ |
ಶಾಂತಮನೆ ಪುಗುವೊಡಂ – ಕಟ್ಟದಿರೊಳಗೆ ನಿಲ್ವೊಡಂ ||
ದೇಹಮಂ ಬಿನಿರ್ಪೊಡಂ – ಭಯವಶದೆ ಪರಿವೊಡಂ |
ಗೊಂದಣಮಿ ನಲಿವೊಡಂ – [1]ಪ್ರಸವದೊಳ್ ನಲಿವೊಡಂ ||
[ಪಲತೆರುಗೆ ಪರಿವೊಡಂ – ಪಾಲ್ಮರಕೆ ಬರ್ಪೊಡಂ |
ನೀರ್ಕಡಿಗೆ ಪೋಪೊಡಂ –
ಮಱೆ ನೆಟ್ಟ ಸುಂಟೆಂಗೆ – [2]ಪೆಱವನಯಮಿಲ್ಲೆಂಗೆ ||]
ಭಯದೋಱೆ ವಿಪರೀತ – ನಯ[3]ಮಾದೊಡದು ಭೂತ |
[4]ಆಱಿಗೆ ಪಿಂಗಲಿಯ ನಯಮಿಂತು – ಪೋದಗೆಯ ನಯನಮಂತು || ೧ ||

### ೨. ಪೋದಗೆಯ ಶಕುನಂ

ಮಱಗಳೊಳ್ [5]ಗೂಡಾಗೆ – ತತ್ತಿಗಳ್ ಬೆಸನಾಗೆ |
ನಲುನಳಿಯ ಸರವಾಗೆ – ನಯಮು(ವು)ಳತಿದ್ದಾಗೆ ||
ಮೂತ್ರಿಸಲ್ ವಿಷ್ಟಿಸಲ್ – [6]ಕೊಳ್ಗುಮತಿ ವೃಷ್ಟಿಗಳ್ |
[ಕಾಷ್ಠದೊಳ್ ಮೂತ್ರಿಸಲ್ – ಮಱೆ ಬಡಪಮೆಂಗೆ]
ಕಲ್ಗಳೊಳ್ ಮೂತ್ರಿಸಲ್ – ಆಲಿಕಲ್ಲ ಮಱೆಯೆಂಗೆ ||
[7]ತೆಳುವೞೆಗಳುಟೆಂಗೆ – [8]ಯೆಡದೆಱಂಕೆ(ದಱಟ್ಟೆ)ಯನೆತ್ತೆ |
ಬಲದೆಱಂಕೆಯನೆತ್ತೆ – ಅವಧಿಯಿಂದೊಳಗಕ್ಕು ||
ಅವಧಿಯಿಂ ಪೊಱಗಕ್ಕು – ಯೆಡಚೇಷ್ಟೆಯಂ ಕಂಡು |
ಭಾವಿಸ್ಸೆ ನೀನಿಂತು – ತಣ್ಣಿತ(ಪ್ಪಡಂ)ಪ್ಪೆಡೆಗಳೊಳ್ ||

---

1 ಪ್ರಸನ್ನವಡೊಂನವಿಗೆ. 2 ಪೆರವು ನಯವೊಲ್ಲಂಗೆ. 3 ಮಾಡದದು ಘಾತ್ರ. 4 ಆದರಿಗೆ ಪಿಂಗಲಿಗಿಂತು ಮೋದಿನಿಯ (ನಯ) ಬಂತು, ಪಿಂಗಲಿಯ ಶಕುನವೊಳಿಂತು ನೋಡಲ್ಕೆ. 5 ಗೂಡೊಳಗೆ. 6 ಮಳೆ ಸಮೃದ್ಧಿಗಳು. 7 ತಳುವಳಿಗಳುಂಟೆಂಗೆ. 8 ಬಲು ಚೇಷ್ಟಯದಿತ್ತು ಬಲವೊಳೊಂಕೆಯನಿಕೆ.

ರಗಳೆ|| ನೀರ್ದಾಣ ದೆಡೆಗಳೊಳ್ – ಕುಱಿಗಳಪ್ಪೆಡೆಗಳೊಳ್ |
[1]ಬೆಳ್ಮಾಳದೆಡೆಗಳೊಳ್ – ಭೀತಂಗಳಾಗಿಯುಂ ||
ತತ್ತ್ರಿಸಮನಾಗಿಯುಂ – ಕೈಗಡಿ(ಱಿ)ಯೆ ಮಡಿವರಂ |
ಬಿಡದೆ [2]ತಳ್ತಾದೊಡಂ – ಮಱೆ ಬಱಗುಮೆಂದಱಿಗೆ ||
ಶುಭ ಚಿತ್ತನಿಂತಱಿಗೆ – ಧರೆಗೆ ಬಳ್ಕೆಯೊಳ್ಪವೊಱೆಗೆ |
ಪೋದಗೆಯ ನಯನವಿಂತು – ಶುನಕಂಗೆ ಕುಱಿಪಂತು || ೨ ||

### ೩. ಶುನಕನ ಶಕುನಂ

ರಗಳೆ|| (ಬಂದು ನಿಶ್ಚಯುವಱಿಗೆ) ಬನತತಿಯೊಳೂಳ್ದೊಡಂ – ನೆರೆದುನಿಂದೂಳ್ದೊಡಂ |
ಮನೆಯಮೇಲೂಳ್ದೊಡಂ – ಗಗನಕ್ಕೆ ಬಗುಳ್ದೊಡಂ ||
ಬಗೆದೆಬ್ದು [3]ನಿಂತು ಬಗುಳ್ವೊಡಂ ಬನದ[4]ಕೆಳಗಾದೊಡಂ |
ಪಸುಗಳೊಡವರ್ಪೊಡಂ – ಪಾರೈಸುತಿರ್ಪೊಡಂ ||
ಸಿಂಧು ಕೆಳಗೂಳ್ವೊಡಂ – ಶಾಂತದೊಳೆ ನಿಲ್ವೊಡಂ |
ಮಱಿಗಳಂ ಮಿಗುವೊಡಂ – [5]ಬಲಚೇಷ್ಟೆ ತೋರ್ಪೊಡಂ ||
ತಂಪಿನೊಳ್ ಸುಱಿವೊಡಂ – [6]ನೀರ್ಗೋಡನ ನಡವರ್ಪೊಡಂ |
ನೀರನೋಕರಿಪೊಡಂ – ತಾಣದೊಳೆ ಪರಿವೊಡಂ ||
ಗಾಳಿಗಿದಿರಪ್ಪೊಡಂ – ನಯನದೊಳಂ ಪೊರಳ್ವೊಡಂ |
ಫಲವಾಗೆ ಪೋಪೊಡಂ – ಕುಂಟೆಯೊಳ್ ವಿಣಿಗಳೊಳ್ ||
ಮುಟ್ಟನೀಯೆಡೆಗಳೊಳ್ – (ನಿಂದು) ಮೂತ್ರಿಸುವೊಡಂ |
ಗೋಣ್ನುಲಿದು ಬಿಱ್ದೊಡಂ – ತನ್ನಮೆಯ್ ಬಿದಿರ್ದೊಡಂ ||
ಮೊಗಮನೊಡ್ಡುತಿರ್ಪೊಡಂ – ತೆವಱನೇಱಿರ್ಪೊಡಂ |
ಪೊ(ಪೆ)ಣೆದೆರಡುಮಿರ್ಪೊಡಂ – ಆಗದೆಂದಱಿದದಂ ||
ನದಿಯತಾಱಿದೊಡಂ – ಫಲತರುಗೆ ಪೋದೊಡಂ |
ಗಿಡುಗಳೊಳ್ ಮರಂಗಳೊಳ್ – ಬಿಡದೆ ಮೂಸಿಯು ಮೂತ್ರಿಸಲ್ ||
ಅದಕಂಡು ಮುಖಮನೀಕ್ಷಿಸಲ್ – ತಾ ಮಱೆಗಳೊಳ್ಳಿತುಮಕ್ಕುಂ |
ಅಳಿನಯನದೊಳಿಳಿವಕ್ಕುಂ – ಆಗುಳಿಸಿ ಕೊಱೆವೊಡಂ ||
ನೊಱೆದು ಮೆಯ್ಮುಱಿವೊಡಂ – ಬಿಶದೆ ಚಿಂತಿಸುತಿರ್ಪೊಡಂ |
ನೋಡಿ ಕಣ್ಬಿಡು(ಡಿ)ವೊಡಂ – ಬೂದಿಯೊಳ್ [7]ಪಡುವೊಡಂ ||

---

1 ಬೆಳುಮಾನ. 2 ತಳೊಡದಡಂ. 3 ನಿಕ್ಕಿ. 4 ಕಡೆಗಾದೊಡಂ ಕಿಡಿಸುತಿರ್ಪೊಡಂ. 5 ಬಲದೆ ಮೂತ್ರಿಸುವೊಡಂ. 6 ನಿಗೋಚ. 7 ಪೊರಳ್ದೊಡಂ.

ರಗಳೆ|| ಬಿಡದೆ ನೀರ್ಗುಡಿವೊಡಂ – [1]ಮನೆಮನೆಯ ಪುಗುವೊಡಂ |
ರಾಗರಸವಱುವೊಡಂ – [2]ಬಿಡದೆ ತಾಂ ನಲಿವೊಡಂ ||
ಬಿಡದೆ ಕಿವಿ ಬ(ಪ)ಡಿವೊಡಂ – [3]ಎಡದೆ ಮೂತ್ರಿಸುವೊಡಂ |
ಮಡುಗಳಂ ಪುಗುವೊಡಂ – [4]ನೆಲನಕಂಪುಣ್ಬೊಡಂ ||
ಗೋಡೆಗಳನಡರ್ವೊಡಂ – ಮೞೆಯಾಗದೆಂದಱಿಯೆ(ಗೆ) ಱಟ್ಟಯ್ಯನಱಿಪಿದಂ || ೩ ||

ಕಂ|| ಶ್ವಾನಂಗಳ್ ಸಂಜೆಯೊಳಂ |
ಭಾನುವ [5]ನೋಡುತ್ತುವೂಳೆ ಕಲಹಂ ಕ್ಷಾಮಂ ||
ಮಾನಪ್ಪ [6]ಮೞೆ ಭಯಾವಹ |
ಮೇನುಂ ಸಂದೇಹಮಿಲ್ಲದಕ್ಕುಂ ಱಟ್ಟಾ || ೪ ||

ಆಳಗೆ ಮನೆಯೊಳ್ ದೇ(ದಿ)ವಸಮು |
(ನೋ)ನೂಳೆಯೆ ನಿಂದಿರಿಸಿ ಕಡೆಯನೆಣಿಸುತೆ [7]ಬಾಸಾ ||
ಲೀಲೆಯೊಳೆ [8]ನೀರನೊಕ್ಕೊಡೆ |
ಗಾಲಯಮೇಲಿ(ಲ)ನಿತೆ ಸಮಯದೊಳ್ ಮೞೆಯಕ್ಕುಂ ? || ೫ ||

(ಇಂತು ಶಕುನತ್ರಯಂ)

ಇಂತು ಶಕುನಾಧ್ಯಾಯಂ ತೃತೀಯಂ ೩ ಸಮಾಪ್ತಂ.

---

1 ದಿಷ್ಟಮಂ (ಧಿಷ್ಣ್ಯಮಂ?) 2 ಕ್ರೀಡಿಪುದನುಱುವೊಡಂ. 3 ಯಂದದೆಮೂ. 4 ನೆಲಕಂಪುಪಡಂ. 5 ನಡೆನೋಡಿ ಯೂಳೆ. 6 ಮಳೆಯ ಭಯವವೇನು ಸಂದೇ. 7 ಬಾಲವಿಪ್ರಯೊಳಗೆ. 8 ನಿರನೊಕ್ಕ ಕಾಲಮೆನಿತು ದಿವಸದೊಳು.

# ಚತುರ್ಥಾಧ್ಯಾಯಂ

## ಸಸ್ಯೋತ್ಪತ್ತಿ ನಿಮಿತ್ತಾಧ್ಯಾಯಂ

ವ|| ವಾಯುಚಕ್ರ(ನಿಮಿತ್ತ)ಮಂ ಪೇೞ್ವೆಂ—

ಉ|| ಒಪ್ಪಲನೂಲ ಸೊರ್ವೊಱಿನ ಕಪ್ಪಡಮಂ ಜಿನಸಂಖ್ಯಹಸ್ತದಿಂ |
ನೇರ್ಪಡಿಸಿರ್ದ ದಂಡಿಗೆಯಮೇಲೆ ಪತಾ[1]ಕೆಯನೆಯ್ದೆ ಕಟ್ಟಿ ಪ ||
ಟ್ಟಿರ್ಪುಗೆ ನಟ್ಟನಾಸಡಿಯ ಪುಣ್ಣಮೆಯುಂದಿನ ಪೂರ್ವಯಾಮದೊಳ್ |
[2]ತೋರ್ಪನೆ ಗಾಳಿಯಾವ ದೆಸೆಯೊಳ್ ಸಲೆ ಬೀಸುಗುಮೆಂಬುದಂ ಬುಧರ್ || ೧ ||

ಚಂ|| ಸುರಪ ಕುಬೇರ ಶಂಕರದಿಶಾಲಿಯ ಗಾಳಿಯೊಳೊಳ್ಳಿತಕ್ಕುಮಾ |
ವರುಣನಿನಲ್ಪವೃಷ್ಟಿಯನಿಲಾಗ್ನಿಯ ಮಂಡಲದಿಂ (ಸು)ವೃಷ್ಟಿ ಕಾಲನಿಂ ||
ನಿರುತಿಯೊಳಿಲ್ಲಮೆಂದು ಮೞೆ ಯೆಣ್ದೆಸೆಯಿಂ ಬಿಡೆ ಬೀಸೆ ಗಾಳಿ ನಿ |
[3]ತ್ತರಿಸದೆ ಬೀಸಿದಂದು ಮೞೆಯಿಲ್ಲ ನೆಲಂ ಪುಡಿವಿಟ್ಟು ಪಾಱುಗುಂ || ೨ ||

ಉ|| ಭಾವಿಸಿ ನೋೞ್ಪೊಡಾಸಡಿಯ ಪೂರ್ಣಮೆಯುಂದಿನ ಪೂರ್ವಯಾಮದೊಳ್ |
[4]ಶ್ರಾವಣಮಾದಿ ಕಾರ್ತಿಕೆವರಂ ಬಲದಿಂ ಬರೆ ಗಾಳಿಯಾದೊಡಾ ||
ಜಾವದ ತಿಂಗಳೊಳ್ [5]ಮೞೆಯೆ ಕೊಳ್ಗುಮದಲ್ಲದೊಡಿಲ್ಲದಿರ್ಪುದುಂ |
ಪಾವಕಮಿತ್ರನಿಂದೆಡದೆ ಬೀಸಿದೊಡಾಯದೆ ಕೊಳ್ಳದಿರ್ಪುದುಂ || ೩ ||

ಕಂ|| ಮಾರುತಿ [6]ಬೆಸಗೊಳೆ ಬೀಸಂ |
ದಾರುತಿ ಯೆಡೆಗೊಂಡೊಡಣಮೆ ಬೆಳೆಯದು ಬೆಳೆದುಂ ||
ಚೋರಾರಿ ಬಾಧೆಯಿಂದಂ |
ಧಾರಿಣಿಯೊಳ್ ಪೇೞ(ೞ್ಬೆಳ)ಸು ಕೇಡು ಸನ್ಮತಿ ಬಿಟ್ಟಾ* || ೪ ||

ಹುತವಹಯುಮನ್ನೈಋತಿ ಮರು |
ಪ್ರತತಿಯೊಳಿರೆ ಲೇಸು ಚಂದ್ರ(೧) ಭುಜ (೨) ಶಿಖಿ (೩) ಗತಿ (೪) [7]ಸಂ ||
ಯುತಮಂಗಳಮೆನೆ ಕಾಡಿಗೆ |
ಸಿತಮುಕ್ಕುಂ ತೆನೆಯೊಳೆಂದು ಪೇೞ್ದಂ ಬಿಟ್ಟಂ? || ೫ ||

(ಇಂತು ವಾಯುಚಕ್ರ ನಿಮಿತ್ತಂ)

ವ|| ಗೋ ಪ್ರವೇಶ ಲಕ್ಷಣ(ನಿಮಿತ್ತ)ಮಂ ಪೇೞ್ವೆಂ—

ಮ|| ಎಸೆವಾಷಾಢದ ಪೂರ್ಣಮಂ ಕಳೆದು ಬಪಾರ್ನೌಮಿಯುಂದೆಯ್ದೆ ಪೂ |
ಜಿಸಿ ಪೆರ್ಬಾಗಿಲ ಪಕ್ಕದೊಳ(ದಿ)ರ್ದ ಪಸುಗಳ್ ಮೇದೂರ್ಗೆ [8]ಬರ್ಪಲ್ಲಿ ಭಾ ||
ವಿಸೆ ಶುಭ್ರಾಭ್ರನಿಭಾಂಗ ತುಂಗ ವೃಷಭಂ ಮುಂ (ಮೇಣ್) ಪೊಕ್ಕೊಡತ್ಯುತ್ತಮಂ |
ವಸುಧಾಚಕ್ರದೊಳಿಂಬಿನಿಂ ಮೞೆಗಳುಂ ಧಾನ್ಯಂಗಳುಂ ಪೆರ್ಚುಗುಂ || ೬ ||

---

1 ಕೆವೊಳೆಯ್ದೆ. 2 ತೊಟ್ಟನೆ. 3 ತ್ತಂಸದೆಂಗಿದಂದು, ನಿಸ್ತರಿಸಿದೆಂದು ಮೞೆ. 4 ಶ್ರವಣಮಾದಿ ಕಾರ್ತಿಕವರಂ ಬರೆದಂ ಬಿಡದೆ ಘಾಳಿ. 5 ಮಳೆಯ ಕೊಳ್ಪದು ದಲ್ಲದಡೆಯಿಲ್ಲದಿಪ್ಪುದಂ. 6 ಬೆಸಗೊಳ್ಪದೆ ಬೆಸನೆಮಾರುತ ಪೆಪೆ. 7 ......ಸಂಯುತಮಂಗಳಂ ಮನೆ ಕಾಡಿಗೆ ಸಿತ. 8 ಬರ್ಪುದ ಭಾವಿಸಿ ನೋಡುವುದು ಸುಭ್ರಂಗತುಂಗ.

* ಇಲ್ಲಿ "ವಾಯುಚಕ್ರಂ ಸಮಾಪ್ತಂ" ಎಂದು ಒಂದು ಪ್ರತಿಯಲ್ಲಿದೆ.

ಶಾ|| ಏಡಂಪೊಕ್ಕೊಡೆ ಚಿತ್ರವೃಷ್ಟಿ ಕುರುಡಂ ಮುಂ[1]ಪೊಕ್ಕೊಡರ್ಥಕ್ಷಯಂ |
[2]ಸೇಡಂ ಪೊಕ್ಕೊಡೆ ಡಾವರಂ ಕಪಿಲೆ[3]ನಿಂ ರೋಗೋದ್ಭವಂ ಮಾಣದೊ ||
ಕೊರ್ಗೋಡಂ ಪೊಕ್ಕೊಡೆ ರಾಜ್ಯಹಾನಿ ಯಿಟ್ಟಗೋಡಂ [4]ಸಾರಿ ಸಾವಂತರಾ |
ಕೇಡಕ್ಕುಂ ಕರಿಯ[5]ಟ್ಟಿನಿಂ ಕಡೆಫಲಂ ಕೆಂದಂ ಪುಗಲ್ ಸತ್ಫಲಂ || ೭ ||

[6]ಉ|| ಏಡಿಯೊಳಲ್ಪವೃಷ್ಟಿ ಕರಿಯಾವಿನೊಳೊಳ್ಳಿಟಿ [7]ಕೆಂದೆಯಿಂದೆ ನಾ |
ಡೋಡಿಗೆ ಬಂಜೆಯಿಂದೆ (ಸತತಂ) ಮಟ[3]ಮಾತನೆ ಪೇಟಿದಿರಣ್ಣ ನಾಡೆ ಪೊ ||
ಕೊರ್ಗೋಡನಿ [8]ನಾಡೆಯಂಗೆ ಕಳವಾಗಿಕು ಮುಗ್ಗುವಕಾಲಿನರ್ಥಮುಂ |
ನೋಡುಗೆ ಕುಂದುಗುಂ ಜಗದೊಳಿಂತಿದು ತಪ್ಪದು ಅಟ್ಟನಿಷ್ಟದಿಂ || ೮ ||

ಕಂ|| ಪಸುವಿನ[9]ರೂಪಿಂ ಪ್ರಾಯದಿ |
ನಸದೃಶಲಕ್ಷಣದಿನವಱ ಬರವಿಂದಿರವಿಂ ||
ವಸುಮತಿಗೆಲ್ಲಂ ಪೇೞ್ ಭಾ |
ವಿಸಿ ನೀಂ ಪೆರ್ಮೆಟಿಯನಲ್ಪಮಟಿಯುಂ ಬಱನಂ || || ೯ ||

(ಇಂತು ಗೋ ಪ್ರವೇಶ ಲಕ್ಷಣ ನಿಮಿತ್ತಂ)

ವ|| ಭೂಜಾತ ಫಲಮ ನಿಮಿತ್ತಮಂ ಪೇೞ್ವೆಂ—

ಮ|| ಅರುಣಾಶೋಕದ ಶೋಭೆಯುಂ ಕಲಿವೆಯಂ ನ್ಯಗ್ರೋಧ[10]ಮುಂ ಸಜ್ಜೆಯಂ |
ಸಿರಿಸಂ [11]ಮುದ್ಗಮನಿಪ್ಪೆ ಗೋದುವೆಗಳಂ ನೇಱಲ್ [12]ತಿಲಂ ಮಾಷಮಂ ||
ವರ ಭಲ್ಲಾತಕದಿಂದೆ ತೋವರಿ ಕಱಂಕೆಯ್ದೋದವಿಂ ಕವು (ಬಿಳಲ್)? ಕ |
ರ್ಮರನುಂ [13]ವ್ರೀಹಿಯುನಾದಮಂ ಬೆಳೆಯಿಕುಂ ಜೋಳಂ ಮಹೀಭಾಗದೊಳ್ || ೧೦ ||

ಚ|| ಅಳರ(ರಳಿ)ಯಶೋಭೆಯುಂ ಸಕಲ ಧಾನ್ಯಮ ನಿಂಗುಳ(ದಿ)ಮುಂ ಸಣಂಬ ನು |
ಜ್ಜಳಿಪದಿರ್ಮುತ್ತೆ ಪಟ್ಟಿಗಳ ನೇಟಿಲೆವಾಟಿಯ ಪೆರ್ಚು ಗುಂಜೆಯಂ ||
ತಳಱದೆ ಬಯ್ಸಿ ಮಿಕ್ಕಗಸೆಯಂ ಬೆಳೆಯುಪ್ಪುದು ಕೃಷ್ಣ (ಕೆಂಪು) ವರ್ಣದಿಂ |
ತೊಳಗುವ ಶೋಭೆ(ಕೆ) ಹೊಂಬೆಸಱನೊಪ್ಪುವ ಹಾಲೆಯೆ ಗಂಧಶಾಳಿಯಂ || ೧೧ ||

ಕಂ|| ತುಂಬುರು ಪೆರ್ಚಲ್ [14]ಜೋಳವ |
ಳುಂಬಂ ಮುತ್ತದೊಳೆ ನವಣೆ [15]ಮೊಲ್ಲೆಗಳೊದವಿಂ ||
ದಿಂಬಾಗಿರೆ ಸಿದ್ಧಾರ್ಥಜ |
ಯಂ ಬೆಳೆಗುಂ ಜಗದೊಳೆಂದನರ್ಹದ್ದಾಸಂ (ಸಾ) || ೧೨ ||

---

1 ಪೊಕ್ಕಂದುಮ. 2 ಮುಂಚಿನಾಸಿ ಹೊಕ್ಕರೆ ಡಾವರಂ, ಮುಂಮಾ ಸೇಡಂ. 3 ನಿಂ ನೀರೊಗದ್ಭಯಂ ಮಣಿದಕೊಂಬಂ ಹೊಕ್ಕರೆ. 4 ಬರೆ ಸಾವಂತರಿಂಗೆ | ಇಳಿಗೊಡ್ಡಾದಡಂದು ಸಾವಂ ಹುಕೇಡಕ್ಕುಂ ಕರಿಯಾವಿನಿಂ ಕಡೆಯ ಫಲಮಕ್ಕು ಕೆಂದವು ಹೋಗಲು ತತ್ಫಲಂ. 5 ಯೆಟ್ಟು ಪೊಕ್ಕೊಡೆ ಫಲಂ. 6 ವೃತ್ತಲಾಸಿ ಯೆಡೆಯಲ್ಪ. 7 ಕೆಂದೆಯ ಕಾಡೊಳಗೆ ಕಾಳಿಗಮಾಗಿತ್ತು. 8 ನಿಂ ನಾಡೊಡೆಯಂಗೆ ಕಾಳಿಗಮ. 9 ರೂಪಂ ಪ್ರಾದಿನಸಂದು ಸುಲಕ್ಷಣ. 10 ಮಃ ಜೆಯಿಂ, ಮಂ ಸಂಜೇಟು. 11 ಮುದ್ದುಮೆಣಿಪ್ಪ, ಮುದ್ಗಮೆನಿಪ. 12 ತಿಲಾಮಾಸಮಂ, ನೆರಲತಿಮಾಂಸ. 13 ಬ್ರಹ್ಮಿಯನಾದರಂ. 14 ಜೋಳಂ ಶಂಖ(ಬ)ಂ ಮುತ್ತ್ಯದೊಳು. 15 ಮೋಲಿ.

ಕಂ|| [1]ಕೀರ್ತನೆಗೆ ಸಂದ ನಂದ್ಯಾ |
ವರ್ತದ ಪೆರ್ಚಿಂದೆ ಪೆರ್ಚುಗುಂ ವೈಡೂರ್ಯಂ ||
ಧೂರ್ತಂಗಿದನಱಿಪದೆ ಕಡು |
[2]ಗೂರ್ತಂಗಱ್ಕೆಱೊಳೆ ಪೇೞ್ವುದೊಳ್ಪಿನ ಬಟ್ಟಾ(ಟ್ಟಂ) || ೧೩ ||

ಉ|| ಸಿಂಧುರದಿಂದೆ ಮುತ್ತು ತಿಲಕಾಂ[3]ಘ್ರಿಪದಿಂ(ದಮೆ)ದೆ ಬೆಳ್ಳಿ ಪೆರ್ಚುಗೆ |
[4]ತ್ತಂ ಧರೆ ಚೆಲ್ವುವೆತ್ತ ಪಲವೆಕ್ಕೆಯಿನೂರ್ಜಿತಹೇಮಸಂಚಯಂ ||
ಬಂದುಗೆಯಿಂದೆ ವಿದ್ರುಮಗಣಂ [5]ಗೊರವಿಂ (ವೃದ್ಧಿಯುಂ) ನುತವಜ್ರವಿಟ್ಟಿಯಿಂ |
ಕಂದಿ(ಡಿ)ದ ನಿಂತು ಪೇೞ್ದ ನೆಗಱ್ದ ನಾಗಕುಮಾರತನೂಜನೋಜೆಯಿಂ || ೧೪ ||

ಚಂ|| ಬಸರಿಯಿನಶ್ವಕೋಟೆ ಕದಳೀದ್ರುಮದಿಂ ಕುಱಿ ಹಸ್ತಿಕರ್ಣದಿಂ |
ದೆಸಗುವ ದಂತಿ ಪಾದರಿಯಿನಾಕಳಪಿಂಡರುಣೋತ್ಪಲಂಗಳಿಂ ||
ವಸುಧೆಗಧೀಶನುನ್ನತಿಯು ಪೆರ್ಚನೆ ಭಾವಿಸು ಮಂತ್ರಿಗಿಂತು ತಾಂ ||
ಬಿಸರುಹದೊಳ್ಪಿನಿಂ ದ್ವಿಜರ್ಗೆ ನೈದಿಲ ಪೆರ್ಚನೆ ವೈಶ್ಯಸಂ(ಘಕಂ)ಕುಳಂ || ೧೫ ||

ಚಂ|| ಕುವಳಯದೊ(ದಿ)ಂದು(ದೆ) ಪೆರ್ಚುಗೆ ಚತುರ್ಥ(ರ)ರ ಗಾವಿಲ ಪೆರ್ಚು [6]ಪಂಚಮ |
ರ್ಗವರೆಯು ಪೆರ್ಚು ತೆಲ್ಲಿಗರ್ಗೆ ಮಿಕ್ಕ ಕುಸುಂಬೆಯು ಕಾರುಕ ವ್ರಜಂ ||
ವಿವಿಧವಿಳಾಸದಿಂ ಸುಖದಿನಿಂತಿದು ಬಾೞ್ವುದು ಚೂತವೃಕ್ಷದಿಂ |
ದವನಿತಳಕ್ಕೆ ಸೇವನೆ[7]ಯುಂ ಮಾ(ಮೂ)ಡುಗು ಮೆಲ್ಲಜಗಕ್ಕಮುತ್ತಮಂ || ೧೬ ||

ಚಂ|| ಕೊಡಸಿಗೆಯಿಂದೆ ಕುತ್ತುಮಲೆಗುಂ ಕಡವಿಂ ಮಱೆಯಿಲ್ಲ ಬನ್ನಿಕಾ |
ಯ್ತೊಡೆ ತಱಿ ಕೊ [ರ್ವೆ ಪೆ] ರ್ವಸವು ಕೇರಮುರಂ ಫಲವಾಗೆ ಭೀತಿಯೋ ||
ಗಡಿಸದು ನಾಗಕೇಸರದೆ [8]ಜೇನಿನ ಪೆರ್ಚು ಸುಭಿಕ್ಷಮಾಗಿಕುಂ |
ಬಿಡೆ ಪಿರಿದಾ(ಫಲಮಾ)ದೊಡಗ್ನಿಭಯಮಾಬೆಟಲಿಂ ಕಡುಗಾಳಿ ಪೆರ್ಚುಗುಂ || ೧೭ ||

ಪಿರಿಯಕ್ಕರಂ|| ಉದಿರ್ದ ಮುತ್ತದಕಾಯ್ಗಳಂ ಸುಲಿದಾಗಳೆರಡು[9]ಗೊಟ್ಟೆಗಳಕ್ಕು(ಮು)ದಱೊಳಗಣ|
ಮೊದಲಗೊಟ್ಟೆಯಿಂ ಕಾರಫಲಮಕ್ಕು ಕಡೆ(ಯೊಳೊಪ್ಪುವ)ಯಗೊಟ್ಟೆಯಿಂ
ಕಡೆಯಫಲಮಕ್ಕುಂ ||
ಮೊದಲಿಲ್ಲದೊಡಾ ಕಾರಫಲಮಿಲ್ಲ ಕಡೆಯಿಲ್ಲದೊಡಾ ಕಡೆಯಫಲಮಿಲ್ಲ |
ತೊದಱಮಾತಲ್ಲ ಸರ್ವಜ್ಞ(ಸು)ಭಾಷಿತಮೆಂದಿದಂ ಪೇೞ್ದಪಂ ಬಟ್ಟಗಾಂಕಂ|| ೧೮ ||

1 ಬೆರ್ದನೆಗೆ ಸಂದ್ಯನುದ್ಯ. 2 ಧೂರ್ತನಿದನರುಪದೇ ಕಡುಂಗೂರ್ತಂಗಳ್ಕಂ, ಗಿದನೊಲ್ದು ಪೇೞ್ದನೆ. 3 ಘ್ರಿಗಳಿಂದೆ. 4 ತ್ತಂ ಕಡು, ಪಿಚ್ಚುಗತಂ ಚೆಲುವೆತಪ್ಪದ ಕಯನೂರ್ಜಿತ. 5 ಗೊರವಾನಕ ವಜ್ರವೃಷ್ಟಿ ಕಂಡಿಂದ ಸಾತುಕೆಳಗಳ. 6 ಪಾರ್ವರಿಂ. 7 ಯ ಮಾಡದು. 8 ಜೀವನ, ಬೇವಿನ, ಜೇಗಿನ. 9 ಬೀಜದಿಂ ಕಡೆಯ ಫಲವೊಳ್ಳಿತಕ್ಕುಂ.

ಕಂ|| ಮಾವು ಬರೆ ನವಣೆ ಬೆಳೆಗುಂ |
ಬೇವಿನೊಳೆಳ್ಳಕ್ಕು [ಮಂತೆ] ಹು(ಪು)ಣಿಸೆಗಳೊದವಿಂ ||
ಭಾವಿಸೆ ನೆಲ್ಲುಂ ಬೆಳೆಗುಮ (ಬೆಳೆ) |
ದಾ(ಯಾ)ವುದು ಮೆಕ್ಕೆಯೊಳೆ ಬೆಳೆಗುಮೊಳ್ಪಿನ ಱಟ್ಟಾ || ೧೯ ||

ಅಡವಿಯ ಮಹೀಜರಾಜಿಗ |
ಳೆಡೆಗಳೊಳಂ ಪೂತು ಕಾಯ್ತು ಪಣ್ತಿಡೆ ಕಂಡುಂ ||
ಪೊಡವಿಯೊಳಿಂತಿರೆ ಧಾನ್ಯಂ |
ಕೆಡದಿಂಬಿನೆ ಬೆಳೆಗುಮೆಂದನರ್ಹದ್ದಾಸಂ || ೨೦ ||

ಎಂದಿಂತು ವನಮಹೀರುಹ |
ಸಂದೋಹದೆ ಫಲಮ[1]ನೂನಮಂ ಭಾವಿಸಿ ನೀಂ ||
ಕುಂದದೆ ಧಾತ್ರಿಯೊಳಂ ಪೇ |
ೞೆಂದುತ್ತಮಮಪ್ಪ ಧಾನ್ಯಮಂ ವಸ್ತುಗಳಂ || ೨೧ ||

(ಇಂತು ಭೂಜಾತ ಫಲನಿಮಿತ್ತಂ)

ವ|| ಇನ್ನು ಮೞೆಯ ನಯಮಂ ಪೇೞ್ವೆಂ—

ಪಿರಿಯಕ್ಕರಂ|| ಮೂಡಪಡು[2]ವಲ್ಗೆ ಸೈತಾಗಿ ಸೂತ್ರಂಬೊಯ್ದಾಷಾಢಮಾಸದ ಪೂರ್ಣಚಂದ್ರಂ |
ಮೂಡುವಸ್ತಮಿಸುವೆರಡುನೆೞಲ್ಗಳನರ್ಚಿಸಿಟ್ಟು ನಡುವೆಮೂಱು ಮೊೞ(ನ)ನಿಟ್ಟು||
ನೋಡೆ ಬಡಗಣ್ಗೆ ನೆೞಲೊತ್ತಿದೊಡೆ ಪೆರ್ಮೞೆಗಳಕ್ಕುಂ ನಡುವಾಗೆ [ಮೞೆ] ಮಧ್ಯಮಂ |
ನಾಡೆ ತೆಂಗಣ್ಗೆ ನೆೞಲೊತ್ತಿದೊಡೆ ಮೞೆಯಿಲ್ಲೆಂದಪಂ ಱಟ್ಟಗಾಂಕಂ || ೨೨ ||

ಕಂ|| ಸಲೆ ಪುಷ್ಯದ ಪೂರ್ಣೆ(ಪುಣ್ಣ)ಮೆಯೊ(ಳೊ) |
ಪ್ಪಲವರಳೆಯುನಸ್ತಮಾನದಾಗಳೆ ಪೊಸ[3]ಮಲ್ಲ ||
ದೊಳಿಕ್ಕಿ ಬಯ(ಲಲ್ಲಿ)ಲೊಳಟ್ಟದ |
ಱೊಳಾದ ಪನಿಯೆನಿ[4]ತನಿತ್ತೆ ಮೞೆಗಳ್ ಕೊಳ್ಗುಂ || ೨೩ ||

ಮುದದಿಂದಮೆ ನೋೞ್ಪುದು ಜ್ಯೇ |
ಷ್ಠದ ಪುಣ್ಣಮೆಯಂದು ಪಡುವ ಕೊರ್[5]ಡುದಯಿಸೆ ನೀ ||
ರ್ಗದಿರಾದೊಡಸುರಾಶೆಯು ಬೀ |
ಸಿದ ಗಾಳಿಯು ಮುಗಿಲ ಕಾಣ್ಕೆಯಿಂ ಬಱಿನಕ್ಕುಂ || ೨೪ ||

1 ನಲ್ಪ ಫಲಮಂ. 2 ವಣಂ. 3 ಶ್ರಾವೆಯೊ. 4 ಯೆನಿತೆನಿತಾದುದಾ ಮೞೆ ಕೊಳ್ಗುಂ, ಪನಿಯನಿತು ನೋಡೆ ಮೞೆ. 5 ಡುದಯಿಸಿ ಮೇಘ್, ಮೇಘಾನೀ.

ಕಂ|| ದಿವಸ(ಪತಿ)ಕರ ದೀಪ್ತಿಗೆಟ್ಟಂ |
ದು[1]ವಿನ ವೊಲಿರೆ[ಘನ] ಘನಾಳಿ ಕಾಗೆಯ ಬಸಿಱಿಂ ||
ದವನೊಳಕೊಂಡಿರೆಯುಂ ತೀ |
ಡುವ ಪವನ(ಂ) ನಿಋತಿಯೊಳಾಗೆ ಮೞೆಯಿಲ್ಲೆಂದಂ* || ೨೫ ||

ಜಳಜಸಖಬಿಂಬ ಮತ್ತು |
ಜ್ಜ್ವಳಮಪ್ಪೊಡೆ ವಾಯು ಪವನನೊಳ್ ಬೀಸುವೊಡಂ ||
ಜಳದಂಗಳ ರುಚಿ [ಯಂತಿ] ನಿ |
ವರ್ಣಳಮಪ್ಪೊಡಮಧಿಕವೃಷ್ಟಿಯಕ್ಕುಂ ಅಟ್ಟಾ† || ೨೬ ||

(ಇಂತು ಮೞೆಯ ನಯಂ)

ಇಂತು ಸಸ್ಯೋತ್ಪತ್ತಿ ನಿಮಿತ್ತಂ ಚತುರ್ಥಾಧ್ಯಾಯಂ ಸಮಾಪ್ತಂ.

1 ವಿನಂತಿರೆ ಗಗನಾಳಿ.

* ಈ ಕಂದದ ಮೂಲ ಶ್ಲೋಕವು ಒಂದು ಓಲೆಯ ಪ್ರತಿಯಲ್ಲಿದೆ—

ಯಾವತ್ಕಾಕೋದರಾ ಮೇಘಾ ಯಾವಚ್ಚಂದ್ರಸಮೋ ರವಿಃ ।
ಯಾವನ್ನೈಋತಿಕೋ ವಾಯುಸ್ತಾವದ್ದೇವೋ ನ ವರ್ಷತಿ ॥

† ಈ ಕಂದದ ಮೂಲ ಶ್ಲೋಕವು ಒಂದು ಓಲೆಯ ಪ್ರತಿಯಲ್ಲಿದೆ—

ಯಾವ(ದ್ಧಂಸೋ)ತಾಂಸಾದರೋಮೇಘಃ ಯಾವದಗ್ನಿಸಮೋರವಿಃ ।
ಯಾವದುತ್ತರತೋ ವಾಯುಸ್ತಾವದ್ದೇವೋಪ(ವಃ ಪ್ರ)ವರ್ಷತಿ ॥

# ಉತ್ಪಾತಾಧ್ಯಾಯಂ ಪಂಚಮಂ ೫

## ತ್ರಿವಿಧೋತ್ಪಾತಂಗಳ್

ವ|| ಇನ್ನು ತ್ರಿವಿಧೋತ್ಪಾತ ಲಕ್ಷಣಂಗಳಂ ಪೇೞ್ವೆಂ—

ಕಂ|| ಭೂಮಿಯೊಳಪ್ಪುದು ಭೌಮಂ |
ಜೀಮೂತದೊ[1]ಳಪ್ಪುದಾಂತರಿಕ್ಷಂ ಗ್ರಹದಿಂ ||
ತಾಮುಪ್ಪುದು ದಿವ್ಯಮೆನಲ್ |
ನಾಮತ್ರಯದಿಂದಮೆಸೆವುವುತ್ಪಾತಂಗಳ್ ||೧||

೧. ಭೌಮೋತ್ಪಾತಂ

ಕಾಗೆ ಬಿಳಿದಾದೊಡಮಿರುಳೊ |
ಳಾಗಲ್ ಸುರಚಾಪ ಮೆಸೆಯೆ *ಕಪ್ಪೆಗೆ [ಸಲೆ] ಜೆ ||
ಲ್ವಾಗಿ ಯೆಕ್ಕಿ ಚಂಡಿಕೆ ನೆಗೆದೊಡ |
ಮಾಗವು ಮಟೆ ಡಾವರಂಗಳಕ್ಕುಂ ಜಟ್ಟಾ ||೨||

ಸ್ಥಾವರಜಂಗಮಮಪಾತ್ಮಗು |
ಣಾವಳಿಯಂ ಬಿಸುಟು ವಿಕೃತಿಮೆಯ್ದಲ್ ಜಗದೊಳ್ ||
ಸಾವಕ್ಕುಂ ಕೇಡಕ್ಕುಂ |
ಕೇವಲಮೇಂ ಪಲವುತೆಱದ ಪರಿಭವಮುಕ್ಕುಂ ||೩||

(ಇಂತು ಭೌಮೋತ್ಪಾತಂ)

೨. ಅಂತರಿಕ್ಷೋತ್ಪಾತಂ

ಕಂ|| ಇರುಳೊಳ್ ಸುರಚಾಪಂ [2]ನಡು |
ವಿರುಳುಂ ತಾಂ ಧೂಮಕೇತು ಬಾಲದ ಮಿನುಂ ||
ಪರಿವುದ(ಯುಲ)ದಱಿಂದೆ ಧರೆಯೊಳ್ |
ನಿರುತಂ ಪಲತೆಱದೆ ನೃಪರ್ಗೆ ಮೇಣ್ ಕೇಡಕ್ಕುಂ ||೪||

ಚಂ|| ಇರುಳಮರೇಂದ್ರ ಕಾ(ಪ್ಕೃ ದ)ಲವರುಣೋತ್ತರದತ್ತೊಗೆದಿಂದ್ರಚಾಪದಿಂ |
ದರಸು ಪೊದಲ್ಪು ಸೈನ್ಯಪತಿ [3]ತಕ್ಕರ ಸಂತತಿ ಮಂತ್ರಿಮಂಡಲಂ ||
ಧುರದೊಳನೇಕಬಾಧೆಗಳಸುಕ್ರಮದಿಂ ಕಿಡುಗುಂ ಧರಿತ್ರಿ ಭೋ |
[4]ರ್ಗರೆದಿಱದೊಂದುಗುಂ ನೆರೆಯೆ ಬಿಟ್ಟವೆಡಂಗನ ಪೇಲ್ದ ಮಾೞ್ಕೆಯಿಂ ||೫||

ಚಂ|| ಜಗದೊಳಕಾಲವೃಷ್ಟಿ ಕಱೆವಂದು ದಿನತ್ರಯದಿಂದಮೊಂದು ನಾ |
ಡಿಗೆ ಮಿಗಿಲಾಗಿ ಮಿಕ್ಕದಿನಮೇೞುವರಂ ಕಱೆವಂದು ಧಾತ್ರಿ [5]ಬೆ ||
ರ್ಚುಗುಮುಮಮನೀಶ್ವರರ್ ಮಡಿವರಾ ಸಲಿಲಂ ಕಡುಗೆಂಪನಾಳ್ದೊಡ |
[6]ಲ್ಲಿಗೆ ಪೆಣನುಣ್ಕಿ ನೆತ್ತರ ಕಡಲ್ ಸು(ಪ)ರಿಗುಂ ಭುವನತ್ರಯಂಗಳೊಳ್ ||೬||

---

1 ಳಪ್ಪುದಂ(ದೊಂ)ದು ರಿಕ್ಷಗ್ರಹಮುಂ. 2 ಕಾಪಳ ಪೆರ್ಚುಂ. 3 ತಕ್ಕರ. 4 ರ್ಗರೆದು ಧುರದೊಳ ಱುಗುಂ, ರ್ಗರೆದಿರದೊಂದುಗುಂ ನೆಱೆಯೆ. 5 ಪೆರ್ಚು. 6 ಲ್ಲಯೆ ಪೆಣಮಣಿ.

*ಬಱಕ್ಕೆ ಕಪ್ಪೆಯ ಚಿಂಡಿಕೆ (ಶಬ್ದಾನುಶಾಸನ).

ಕಂ|| ಇರುಳೊಳಗಮಿಂದ್ರಚಾಪಂ |
ಮರುತಾನಲಮಂಡಲಂಗಳಿಂದೊಗೆದವಱೊಳ್ ||
ಧರೆಗೊಳ್ಳಿತಾಗದಂತಾ |
ಯೆರಡಱೊಳಂ ಪ್ರಜೆಯುಮಂಟುಗುಮರಸಂ ಸಾಯ್ಗುಂ || ೭ ||

*ಅರವೊಱಸಿನ ಬಣ್ಣದೆ ಡಾ |
ವರಮುಂ ಬಿಳಿದಾಗೆ ನಾಡು ಕಿಡುಗುಂ [1]ಪಕ್ಷಂ ||
ಚರಣಂಗಳುವೊಂದೊಂದಾ |
ಗಿರೆಯುಂ ಪಸುರೆ(ರ)ಡನಾಗೆಯುಂ ಪ್ರಜೆ [2]ಸಾಗುಂ || ೮ ||

ಪವಮಾನಂ ದಹನಂ ವಾ |
ಸವತೋಯಾಧೀಶರೆಂಬಿವರ್ ಸಲೆ ರಾತ್ರಿಂ ||
ದಿವದೊಳಗೋರೊಂದರೆ ಜಾ |
ವವನಾಳ್ವರ್ ಬೇಱೆಬೇಱನುಕ್ರಮದಿಂದಂ || ೯ ||

ಕರಮೆ ಪಿರಿದಾಲಿಕಲ್ ಮೇಣ್ |
ಧರೆಯೊಳ್ ಬೀೞ್ವೊಡೆ ಸಿಡಿಲ್ಗಳೆಱಗುವೊಡಂತಾ ||
[3]ಸುರವಾಯು ಬೀಸುವೊಡೆ ನೆ |
ತ್ತರವರ್ಣದ ಪನಿಗಳಾಗೆ ದುರ್ಭಿಕ್ಷಕರಂ || ೧೦ ||

ಸೃಷ್ಟಿಗೆ ಮಱೆ ಬಱತುದು ವೋ |
ಕೆಟ್ಟತು ಸಂಸಾರಮೆಂದು ಚಿಂತಿಸುವೆಡೆಯೊಳ್ ||
ತೊಟ್ಟನೆ ನಿರ್ಘಾತಾದಿಗ |
ಳೊಟ್ಟೈಸಿದೊ[4]ಡಲ್ಲಿಯಕ್ಕುಮೊಳ್ಳಿಹ ಮಱೆಗಳ್ || ೧೧ ||

(ಇಂತು ಅಂತರಿಕ್ಷೋತ್ಪಾತಂ)

೩ ದಿವ್ಯೋತ್ಪಾತಂ

ವ|| ಇನ್ನು ಪರಿವೇಷ ಲಕ್ಷಣಮಂ ಪೇೞ್ವೆಂ—

†ಕಂ|| ದಿನಕರನಂ ಶಶಿಯುಂ ಪ |
ಚ್ಚನೆವಣ್ಣದೆ ಬಳಸಿ ನಿಂದ ಪರಿವೇಷದೆ ನೆ ||
ಟ್ಟನೆ ಮಱೆ ಕೊಳ್ಗುಂ ತೊ |
ಟ್ಟನೆ ಭಯಮಕ್ಕು [5]ಮಱುದ ಬಣ್ಣದೊಳ್ ನೆಗೞ್ದಿಂದುಂ || ೧೨ ||

1 ಪೊಕ್ಕುಂ. 2 ಯಱುಗುಂ. 3 ಸರು. 4 ದಕ್ಕುಮಲ್ಲಿಯೊಳ್ ಹೆಮ್ಮಱೆಗಳ್, ವಳು ಪೊಮ್ಮೞೆಗಳ್.
5 ಕಾಲದೊಳ್, ಉದಯಕಾಲದೊಳ್.

*ಅರವೊಱಸು—ಪಾರಿವಾಳದ ಪಕ್ಷಿ.

†ಇವೆರಡು ಕಂದಗಳೂ ಒಂದು ಪ್ರತಿಯಲ್ಲಿಲ್ಲ, ಇಲ್ಲಿ ಈ ಸಂಸ್ಕೃತ ಶ್ಲೋಕವು ಒಂದು ಪ್ರತಿಯಲ್ಲಿದೆ—
ದಿನಕರಪರಿವೇಷಂ ಪೂರ್ವಯಾಮೇತುಂತಾ? । ದಿನಕರಪರಿವೇಷಂ ದೃ(ವೃ)ಷ್ಟಿದು(ಯು)ಕ್ತಂ ದ್ವಿತೀಯೇ ॥
ದಿನಕರಪರಿವೇಷಂ ರೋಗಯೋಗಂ ತೃತೀಯೇ । ದಿನಕರಪರಿವೇಷಂ ವೃಷ್ಟಿಕೃತ್ಸಾ ಚತುರ್ಥೇ ॥

ತ್ರಿಪದಿ|| ವರುಸಾಕಾಲದೊಳಭ್ರಂ [1]ಬರಿಸಿ(ರೆ) ಪರಿವೇಷಂ |
ಬರಿಸುಗುಂ ಮೞೆಯುಂ ಮುಗಿ[2]ಲಿಲ್ಲದಿರ್ದೊಡಂ |
ಪರಿವೇಷಂ ಬರ್ಪೊ ಮೞೆಯಕ್ಕುಂ || ೧೩ ||

ಕಂ|| ಎರಡುಂ ಮೂಱುಂ ನಾಲ್ಕುಂ |
ಪರಿವೇಷಂ ಚಂದ್ರ ಸೂರ್ಯರಂ ಬಳಸಿ ನಿಲಲ್ ||
ಪಿರಿಯ ಮೞೆಯಕ್ಕು ಮಲ್ಲದೊ |
ಡರಸುಗಳಿಂ ಕೇಡು ತಪ್ಪದರ್ಹದ್ದಾಸಾ || ೧೪ ||

[3]ಪರಿತಮದೊಂ[ದೊಂ]ದೊಳಗಿರೆ |
ಪರಿವೇಷಂ ಕಲಹದೋಱು ಪೆರ್ವಸಮಕ್ಕುಂ ||
ಪಿರಿದಕ್ಕುವಿನಶಶಾಂಕರ |
ಪರಿವೇಷಂ ಬೆಳ್ಳನಾದೊಡಂ ಮೞೆ ಕಿಡುಗುಂ || ೧೫ ||

ಪರಿವೇಷಂ ಪರೆದ ದಿಶಾ |
ವರದ ನೃಪಾತ್ಮ[4]ಜರುಮೞಿಗು ಮನುಜರ್ಗೆಲ್ಲಂ ||
ಪಿರಿದು ಭಯಮಕ್ಕು [5]ಮೋಣ್ |
ಧರೆಗೆಲ್ಲಂ ನೆಗೞೆ ಪೇೞ್ದನೊಳ್ಪಿನ ರಟ್ಟಂ || ೧೬ ||

ಚಂ|| ಸುರಗುರು ಮಂದಭೌಮರೊಳಗಾಗಿ ನಿಲಲ್ ಪರಿವೇಷ ಮಾದೊಡು |
ರ್ವರೆಗೆ ನಿರಂತರಂ [6]ಪಸವು ಪೆರ್ಚುಗು ಮಾಹವರಂಗದೊಳ್ ನೃಪೇ ||
ಶ್ವರ[7]ರೞಿಗುಂ ಸಿತಂ ನಿಲೆ ಕಿರಾತಬಲಂ ಕಿಡುಗುಂ ಮಹೀಧರಂ |
ಧರಣಿಗೆ ಸಂತಸಂ ಪಡೆಗುಮಾ ವಳಯುಂ ಕಡುಗೆಂಪುವೆತ್ತಿರಲ್ || ೧೭ ||

ಗುರು ಪರಿವೇಷದೊಳ್ ನೆಲಸೆ ವಿಪ್ರಜನಕ್ಕದು ನಾಡೆ ಪೊಲ್ಲ ದೈ |
ತ್ಯರ ಗುರು ನಿರ್ದೊಡಿಲ್ಲ ಮೞೆ ಸೌಮ್ಯನಿರಲ್ ಶಿಶುಗಳ್ಗೆ ಬಾಧೆಯು(ರ್ವಿ) ||
ಜರುಮಿರಲ್ಕೆ? ಡಾವರಮಿನಾತ್ಮಜನುಂ ನಿಲೆ ಪಟ್ಟಬದ್ಧರ |
ಪ್ಪರುಮೞಿಗುಂ ದಿನೇಶಶಶಿಬಿಂಬದೊಳಿಂದಪನಲ್ತೆ ರಟ್ಟಗಂ || ೧೮ ||

(ಇಂತು ಪರಿವೇಷ ಲಕ್ಷಣಂ)

ವ|| ಇನ್ನು ಇಂದ್ರಧನು ಲಕ್ಷಣಮಂ ಪೇೞ್ವೆಂ—

ಕಂ|| ಶ್ವೇತಾಸಿತ ಹರಿತಾರುಣ |
ಪೀತಚ್ಛವಿಯಿಂದಮೊಂದಿ ನಿಲೆ ಸುರಧನು ಜೇ ||
ಮೂತಂಗೞ್ ನೆರೆ(ತೊಱೆಲ್ಕೆ)ದಿರಲ್ಮ |
ಹೀತಳದೊಳ್ ಪಿರಿಯ ಮೞೆಗಳಕ್ಕುಂ ರಟ್ಟಾ || ೧೯ ||

---

1 ಬಱಿಸಿ, ಮೆರಸಿ, ಪೆರಿಸಿ. 2 ಲಿಲ್ಲದೆ. 3 ದುರಿತ. 4 ಜರ್ಗೆ ಮರಣಮುದಕ್ಕುಂ, ಜರ್ಗೆ ಮರಣ ಮಕ್ಕುಂ ಪ್ರಜೆಗಂ. 5 ಮೋಣುರ್ವರೆ. 6 ಯಶ, ಪಸಲು. 7 ರೞಿವರ್ ಸಿತಂ ನಿಲೆ ಕಿರಾತ ಬಲಮೆಲ್ಲಂ.

ಕಂ|| ಪಱಿವಱಿಯನಾಗಿ ಬಣ್ಣದ |
ತೆಱದಿಂ ವಿಚ್ಛಾಯೆಯಾಗಿ ಸುರಧನು ಪೊಗೆದಂ ||
ದಱಿವುದು ತದ್ದಿನಮಾದಿಯೆ |
ಬಱಗುಂ ಮೞೆಯೊಂದುತಿಂಗಳೊಳ್ಪಿನ ಬಟ್ಟಾ || ೨೦ ||

[1]ಪೊಡದರ್ ರವಿಯುದಯಿಪಾಗಳ್ |
ಸಿಡಿಲುಳ್ಕಂ ನಿಡಿಯೆ ಮಿಂಚು ತೋಱಿದೊಡರಸರ್ ||
ಮಡಿವರಿರುಳಿಂದ್ರಧನು ಪೊಗೆ |
ದೆಡೆಗಳೊಳಾ ನಾಡುಕಿಡುಗುಮರ್ಹದ್ವಾಸಾ || ೨೧ ||

ಮೞೆ ಕೊಳುತಿರೆ ಸುರಚಾಪಂ |
ಘಟಿಲನೆ ಪೂರ್ವಾಶೆಯುತ್ತಲೊಗೆದೊಡೆ ಬಱಗುಂ ||
ಮೞೆಯಿಲ್ಲದೊಡಾ ಚಾಪಂ |
ಮೞೆ[2]ಯಂತಪರಾಶೆಯತ್ತಲೊಗೆವೊಡೆ ಬರ್ಕುಂ || ೨೨ ||

ಶ್ವೇತಾರುಣ ಪೀತಾಸಿತ |
ಚಾತುರ್ವರ್ಣ್ಯದೊಳೆ ಧಾತ್ರಿಯೊಳ್ ಸುರಚಾಪಂ ||
ಭೂತಳಕೆ ತೋಱೆ ಪಾರ್ವರ |
ಜಾತಿಯೆ ಮೊದಲಾಗೆ ನಾಲ್ಕು ಜಾತಿಯುಮೞಿಗುಂ || ೨೩ ||

ಓಗಡಿಸದೆ ಪೆರ್ಮೞೆ ಕೊ |
ಳ್ವಾಗಳ್ ಮೋಣ್ ಮಿಂಚು ಮಿಂಚೆ ಪಡುವಣ ದೆಸೆಯೊಳ್ ||
ಬೇಗಮಮರೇಂದ್ರಧನುಪೊಗೆ |
ದಾಗಳೆ ಮೞೆಗಾಲಪೊಳ್ಳತಕ್ಕುಂ ಬಟ್ಟ || ೨೪ ||

(ಇಂತು ಸುರಚಾಪ ಲಕ್ಷಣಂ)

ಇಂತು ಉತ್ಪಾತಾಧ್ಯಾಯಂ ಪಂಚಮಂ ೫ ಸಮಾಪ್ತಂ.

1 ಪೊದಟ್ದು...... ಸಿಡಿಲಳ್ಕಂ ಸಿಡಿಲು ಮಿಂಚು. 2 ಯಂದಪ.

# ವೃಷ್ಟ್ಯಘಾರ್ಧ್ಯಾಯಂ ಷಷ್ಠಂ ೬

## ೧. ಮೇಘ ಪ್ರಥಮಗರ್ಭ ಲಕ್ಷಣಂ

ವ|| ಇನ್ನು ಮೇಘ ಪ್ರಥಮಗರ್ಭ ಲಕ್ಷಣಮಂ ಪೇಳ್ವೆಂ—

ತ್ರಿವಿಧಿ|| ಮಂಡಲವರ್ಷಮಾಗಿ(ರೆ) ಕೊಂಡು ಮಂಜಾಗಿ |
ಕೊಂಡೊಡಂ ತುಂತುರ್ವನಿ(ಯೊಳೆ)ಯಾಗಿ [1]ಬಡಪಮಂ |
ಕೊಂಡೊಡಂ ಪೊಲ್ಲ ವಸುಧೆಯೊಳ್ || ೧ ||

ಕಂ|| ಪಾಪಗ್ರಹಾಂಶಮುದಯಿಸಿ |
ಪಾಪಗ್ರಹಮುದಯಮಾಗೆಯುಂ [2]ವೀಕ್ಷಿಸೆಯುಂ ||
ವ್ಯಾಪಿಸುತೊಳ್ಕಟಿ ಕೊಂಡೊಡ |
ದೇಪಡೆವಾತೊಳ್ಪಿತೆಂದ ನೊಳ್ಪಿನ ಬಿಟ್ಟಂ || ೨ ||

ತ್ರಿವಿಧಿ|| *ಎಂದು ಗರ್ಭಂ ಗಟ್ಟು(ಟ್ಟಂ)ಗಂದಿನ ರಿಕ್ಷೆಯೊಳ್ |
ಯಿಂದು ಮಂದರವಿಕುಜರ್ [ತಾಂ] ಬೆರಸಿ |
ದಂದಿನಾಗರ್ಭ ಭಯಮಕ್ಕುಂ || ೩ ||

ಕಂ|| [3]ಕರಭದ ಕರಡಿಯ ಮೇಣ್ ವಾ |
ನರನೊಟ್ಟೆ[4]ಯ ಪೋಲ್ಕೆಯಪ್ಪ ಮುಗಿಲಿಂದಂ ಭೋ ||
ಗರಿದೆಱಗಿ ಕೊಂಡು ಪೆರ್ಮೞೆ |
ಧರೆಯೊಳ್ ವರ [5]ವರ್ಷಕಾರಿಯಾಗದು ಬಿಟ್ಟಾ || ೪ ||

ಮೊದಲೆ ಮಱೆ ಕೊಳ್ವ ನಕ್ಷ |
ತ್ರದಲ್ಲಿ ಬಂದಿರ್ದ ಚಂದ್ರನಂ ಗ್ರಹನಿಕರಂ ||
ಮುದದಿಂ ಭೇದಿಸೆ [6]ಕೇತುವು |
ಮೊದಲಾಗುತ್ಪಾತ [7]ಮೂಡ ಕಾಣ್ಬೊಡೆ ಶುಭದಂ || ೫ ||

ತ್ರಿವಿಧೋತ್ಪಾತಂಗಳ್ ಕೋ |
ಱುವೊಡಂ ಘನಸಮಿತಿ[8]ಗಾದ ಗರ್ಭಂ ಕಿಡುಗುಂ ||
ನವಗರ್ಭದ [9]ಲಲನೆಗುಱ |
ದ್ರವಮಾದೊಡೆ ಕರಗುವಂದ[10]ದಿಂದಮೆ ಕಿಡುಗುಂ || ೬ ||

---

1 ಬಡಪಂ ವ್ಯಾಕೊತ್ಕಟಮಾಗಿಯುಂ, ಪಡವಂ ವ್ಯಳುಕಟ್ಟು. 2 ನಿರೀಕ್ಷಿಸೆ, ನೀಕ್ಷಿಸಿ, ಯಿಕ್ಷಿಸಿ. 3 ಕರಭದ ಕರಡಿಗಳೆಮ್ಮೆಯವಾ. 4 ಯನೆ ಪೋಲ್ಪ. 5 ಕತ್ಸಕಾರಿ, ವತ್ಸಕಾರಿ, ವತ್ಸಕಾರೆ. 6 ಕೇಡುಂ. 7 ಮೂಡಿ, ಮೂಡೆ. 8 ಗೋಕ. 9 ಲಲನೆಯ ಸದ್ದ್ರವಮಾಗಿಯೆ. 10 ದಿಂದಂ.

*ಒಂದು ಪ್ರತಿಯಲ್ಲಿ ಈ ಅಶುದ್ಧ ಕಂದವಿದೆ (ಕಂದ ಲಕ್ಷಣವು ಕೆಟ್ಟಿದೆ)—

ಎಂದು(ದಾ) ಗರ್ಭಂ ಗಟ್ಟುವು । ದಂದಿನೊಳಿಂದುವುಂ ರವಿಕುಜರ್ ಬೆರಸಿ ||
ಮಂದನೊಳಿರಲ್ಕೆ... । ಕಂದಿದ ಗರ್ಭಂ ಭಯಮುಮೆಂದೆನರ್ಷದ್ವಾಸಂ ॥ ೩೩ ॥

ಕಂ|| ಬೆಳಸ(ಸಿ)ಂ ಬಳೆಗುಂ ಗರ್ಭಂ |
ಗಳಿ[1]ಯಿಪ್ಪುದುತ್ಪಾತದಿಂದ ಮೆಂಬೀತೆಱನಂ ||
ತಿಳಿವಾಗೆ ಪೇೞ್ದ ನವಸೀ |
ತಳಕೆಲ್ಲಂ ಮೆಚ್ಚಿ ಪೊಗೞೆ ಪುಸಿವರ ಶೂಲಂ || ೭ ||

ಪದಿನಯ್ದು ಯೋಜನಂಗಳು |
ಮದು ಮಂಡಲ ವರ್ಷವೆಂಬರಂತದ ನಾರ ||
ಯಯ್ದು ಮೇಣ್ ಪನ್ನೆರಡುಂ ಗಾ |
ವುದ ಮಂಡಲ ವರ್ಷವೊಂದು ನುಡಿವರ್ ಕೆಲಬರ್ || ೮ ||

[2]ಎನಿತು ತೊಲಗಿಸಿದೊಡಂ ಪುರು |
ಷನ ಪು[3]ಣ್ಯದ ಫಲವೆ ನೃಪತಿ ಜೀವಿತಮಂ ತಾಂ ||
ಅನುನಯಿಪೆ ಜನಗ ಪುಣ್ಯದೆ |
ಘನಾಘನಂ ದ್ರೋಣಸಂಖ್ಯೆಯಿಂ[4]ದಂ ಕೞೆಗುಂ || ೯ ||

(ಇಂತು ಮೇಘ ಪ್ರಥಮಗರ್ಭ ಲಕ್ಷಣಂ)

೨. ಮೞೆಯ ದ್ರೋಣಸಂಖ್ಯೆ ಲಕ್ಷಣಂ

ವ|| ಇನ್ನು ದ್ರೋಣಸಂಖ್ಯೆಯಂ ಪೇೞ್ವೆಂ—

ಪದಿನಾಱು ಕುಡಿತೆಯ ಕೊಳಗದೊಳವಱ ನಾಲ್ಕುಂ ಕೊಳಗಮೆಂಬುದೊಂದು ದ್ರೋಣ ಸಂಖ್ಯೆಯಕ್ಕುಂ.

ಕಂ|| ಗ್ರಹಬಲಮಿಲ್ಲದೆ ನಾಲ್ಕುಂ |
ಗ್ರಹದಿಂ ಮೞೆ ಕೊಳ್ವುದಿಲ್ಲ ಮೆಂತೆನೆ ನೃಪನೊಳ್ ||
ಮಹಿಮೆವಡೆದವರ ನಿಂತೀ |
ಮಹಿಮೆವರಂ [5]ಮಾಗಿ(ಪ)ಯಂತೆ ಸುಕವಿ ನಿಧಾನಾ || ೧೦ ||

ಸಲೆ ಜ್ಯೇಷ್ಠದ [6]ಪರ ಪಾಡ್ಯದ |
[7]ಜಲರಿಕ್ಷೆಯೊಳಾದ ಮಂಡಲಂಗಳೊಳಗೆ(ಂ) ತಾಂ ||
ಮೞೆ ಕೊಂಡೊಡೆ ಸಲೆ ನೋಡುವು |
ದಲಸದೆ ನೀನಾದ ಪನಿಯೊಳಂ ದ್ರೋಣದೊಳಂ* || ೧೧ ||

(ಇಂತು ದ್ರೋಣ ಲಕ್ಷಣಂ)

---

1 ಯಿಪ ಉತ್ಪಾತ. 2 ಎನುತ, ಯೆನಿತೊಗ್ಗಿಸಿವಡಂ. 3 ಣ್ಯಂ ದೀಪ್ತಿ ಫಲ(ವು). 4 ದವೆ ಪೇೞ್ವೆಂ, ಯಿಂದಂ ತಲಿಗುಂ. 5 ಮಾಗಿಯೆಂತೆನು ಕವಿ. 6 ವರ. 7 ಜಲನಿರೀಕ್ಷೆ.

*ಹಿಂದಿರುವ ಎರಡು ಕಂದಗಳು ಎರಡು ಪ್ರತಿಗಳಲ್ಲಿ ಮತ್ತೆ ಇಲ್ಲಿಯೂ (ಪಾಠಭೇದದಿಂ) ಇದೆ—

ಪಿಡಿದು ರವಿಯುದಯಿಪಾಗಳ್ ।
ಸಿಡಿಲುಳ್ಕಂ ನೀಳ್ದಮಿಂಚು ತೋಱಿದೊಡರಸರ್ ॥
ಮಡಿವರಿರುಳಿಂದ್ರಚಾಪಮೊಗೆ ।
ದೆಡೆಗಳೊಳಾನಾಡು ಕಿಡುಗುಮರ್ಘದ್ವಾಸಾ (ಮರಸಂ ಸಾಯುಂಗ) ॥

ಸಿತ ಪೀತ ರಕ್ತ ಕೃಷ್ಣ ।
ದ್ಯುತಿಯಿಂದುಳ್ಕಂಗಳೊಗೆದುವಪ್ಪೊಡೆ ಪಾರ್ವರ್ ॥
ಕ್ಷಿತಿಪರ್ ಪಾರ್ವರ್ (ಕ್ಷಿತಿ ಪತಿ ಪರದರ್ಗೆ) ಶೂದ್ರರ್ ।
ದ್ಯುತಿ(ಧೃತಿ)ಗಿಡುವರ್ ಸಾವರೆಡೞೊಳಂ ಕಳಹದೊಳಂ ॥ ೬೮ ॥

### ೩. ಮಿಂಚಿನ ಲಕ್ಷಣಂ

ವ|| ಇನ್ನು ಮಿಂಚಿನ ಲಕ್ಷಣಮಂ ಪೇೞ್ವೆಂ—

*ಉ|| ಮಿಂಚಿನ ಬಣ್ಣಮೆಯ್ದೆ ಕರಿದಾದೊಡೆ ಪೆರ್ಮಸವಕ್ಕು ಮಂಗಳಂ |
ಮಿಂಚಿನ ಬಣ್ಣಮೆಯ್ದೆ ಕವಿಲಾದೊಡೆ ಗಾಳಿಯುಮಕ್ಕು ಮತ್ತಮಾ ||
ಮಿಂಚಿನ ಬಣ್ಣಮೆಯ್ದರುಣಮಾದೊಡೆ ಡಾಮರದಿಂದೆ ಪೊಂದುಗುಂ
ಮಿಂಚಿನ ಬಣ್ಣಮೆಯ್ದೆ ಕನಕಚ್ಛವಿಯಾದೊಡೆ ವೃಷ್ಟಿ ಜಿಟ್ಟುಗಾ || ೧೨ ||

ಕಂ|| ಸಿರಿಸದ ಗುಳ್ಳದ ಪೂವಿನ |
ಹರಿಣಾಂಕನ ರುಚಿಯ ಮಿಂಚಿನಿಂ ಮೞೆ [1]ಕೊಳ್ಗುಂ ||
ವರುಷಂ ಕೊಳ್ಳದದುಂ ನೆ |
ತ್ತರ ಪೊಜಿಸಿನ ಪೊಗೆಯ ಭಸ್ಮರುಚಿಗಳ ಮಿಂಚಿಂ || ೧೩ ||

ಹುತವಹ ಯಮ ನಿರು(ಋ)ತಿ ಮರು |
ತ್ಪ್ರತತಿಯ ದೆಸೆಯತ್ತಲಿರ್ದು ಮಿಂಚುವ ಮಿಂಚಿಂ ||
ಕ್ಷಿತಿಗೆ ಮೞೆಯಿಲ್ಲ [2]ಮತ್ತಿನ |
ಚತುರ್ದಿಶಾವಳಿಯ ಮಿಂಚಿನಿಂ ಮೞೆ ಕೊಳ್ಗುಂ || ೧೪ ||

(ಇಂತು ಮಿಂಚಿನ ಲಕ್ಷಣಂ)

### ೪. ಪ್ರತಿಸೂರ್ಯ ಲಕ್ಷಣಂ

ವ|| ಇನ್ನು ಪ್ರತಿಸೂರ್ಯ ಲಕ್ಷಣಮಂ ಪೇೞ್ವೆಂ—

ಮ|| ಪ್ರತಿಸೂರ್ಯಂ [3]ಬಡಗಪ್ಪೊಡಂತೆ ಮೞೆಯುಂ ತೆಂಕಲ್ ಮಹಾವಾತ(ಯು)ಮುಂ |
ದ್ವಿತಯಸ್ಥಾನದೆ [4]ಮೇಘ ಸಂವರುಷಮುಂ ಮೇಣ್ ಕ್ಷಾಮಮುಂ ಮೇಣ್ ಧರಾ ||
ಪತಿಗಕ್ಕುಂ ಮರಣಂ ಜನಕ್ಕೆ ಭಯಮುಂ ಕೇಳ್ದಾದೊಡೀ ಜಿಟ್ಟಿ ಭಾ |
ಷಿತಮಂ ಭಾವಿಸಿ ಪೇೞ್ ಪದ್ಮಸಖನಂ ಸುತ್ತಲ್ ಮಹಾದೋಷಮಂ || ೧೫ ||

(ಇಂತು ಪ್ರತಿಸೂರ್ಯ ಲಕ್ಷಣಂ)

---

1 ಯಕ್ಕುಂ. 2 ಮಿಕ್ಕಿನ. 3 ಸೂರ್ಯನಿಂದಂ ಬಡಗಲೊಗೆಯೆ ಮಹಾವೃಷ್ಟಿ ತೆಂಕಲ್ ಮಹಾವಾಯು. 4 ಮೂ ಸಂವತ್ಸರಂ ಕ್ಷಾಮಮುಂಮಾಗಿ ಭೂಪತಿ, ಮೇಘ ಸೌವರ್ಷಕ್ಷಾಮಂ ವಿಗ್ರಹಂಗಳ್ ಧರಾ, ಮೇಘ ಸಂವರುಷಮುಂ ಮೇಣು ಕ್ಷಾಮಮುಂ ಮೇಣ್ ಭೂಪತಿ.

*ಒಂದು ಪ್ರತಿಯಲ್ಲಿ ಈ ಯರ್ಥವಿರುವ ಸಂಸ್ಕೃತ ಶ್ಲೋಕವಿದೆ—

ವಾತಾಯ ಕಪಿಲಾ ವಿದ್ಯುದಾತಪಾಯಾತಿರೋಹಿಣೀ ।
ಪೀತಾ ವರ್ಷಾಯ ವಿಜ್ಞೇಯಾ ದುರ್ಭಿಕ್ಷಾಯ ಸಿತಾ ಭವೇತ್ ॥

ಮತ್ತೊಂದು ಪ್ರತಿಯಲ್ಲಿ ಈ ಅಶುದ್ಧವಾದ ಈ ಶ್ಲೋಕವಿದೆ—

ಕಪಿಲನದ್ಯುತಿ ಅ(ತ್ಯ)ತಿವಾತಾಯ ರೋಹಿಣಿ ಪೀತಾ ।
ವರುಶಿಷವೆಗ್ನೆಯ ದುರ್ಭಿಕ್ಷಾಯ ಸಿತಾಭವೇತ್ ॥

ಬಜಕ್ಕೆ ಬೆಳ್ಮಿಂಚು ಕಪ್ಪೆಯ ಚೆಂಡಿಕೆ (ಶಬ್ದಾನುಶಾಸನ ಪ್ರಯೋಗ).

(ದಶಧಾತು ಲಕ್ಷಣ ನಿಮಿತ್ತಂ)

ವ|| ಇನ್ನು ಪರಿವೇಷಂ ಮೊದಲಾದ ದಶಧಾತುಗಳ್ ಅಮಾವಾಸ್ಯೆ(ದಸೆ)ಯೊಳಾದ ಲಕ್ಷಣಮಂ ಪೇೞ್ವೆಂ—

೫. ಅಮಾವಾಸ್ಯೆಯೊಳಾದ ಪರಿವೇಷಾದಿಗಳ ಲಕ್ಷಣ ನಿಮಿತ್ತಂ

ಕಂ|| ಪಿರಿದು ಪರಿವೇಷಮುಳ್ಕ(ೞ್ಕ)ಂ |
ಸುರಚಾಪಂ ಪಿಱಿಯಗಾಳಿ ಪೆರ್ಮೞೆ ಬಡಪಂ ||
ಕರಿದಪ್ಪ ರೇಖೆ ನಿಲೆ ಭಾ |
ಸ್ಕರ ಬಿಂಬದೊಳಱಿದು ಪೇೞ್ವುದಮವಾಸೆಗಳೊಳ್ || ೧೬ ||

ಕ್ರಮದಿಂ ಪೇೞ್ದೀ ಕುಱುಪುಗ |
ಳಮವಾಸೆಯೊಳಾದೊಡರ್ಘಮಂ ಭಾವಿಸಿ ಪೇ ||
ೞಮವಾಸೆಯಲ್ಲದಂದವು |
ಸಮನಿಸೆ ಡಾಮರದ [1]ಬಾಧೆಯಕ್ಕುಂ ಜಗದೊಳ್ || ೧೭ ||

ಚಂ|| ಎಸಕದ ಚೈತ್ರಮಾಸದಮವಾಸೆಯೊಳೀ ಕುಱುಪಾದೊಡಂದು ಸೂ |
ಚಿಸು ಗಡ(ದ) ನೋಡೆ ಬೇಸಗೆಯ ಧಾನ್ಯಮನಾವೃಷಭಕ್ಕೆ ಮತ್ತೆ ಭಾ ||
ವಿಸು ವನಮೂಲಮಂ ಫಲಮನೋಸರಿಸುತ್ತಿರೆ ನಾಲ್ಕು ತಿಂಗಳೊಳ್ |
ಕುಸಿಯದೆ ಮಾಱಲಿಮ್ಮಡಿಸುಗುಂ ಪರದೊಳ್ಪಿನ ಬಿಟ್ಟನಿಷ್ಟದಿಂ || ೧೮ ||

ಮ|| ಉದಯಾರ್ಕಂ ಮಿಥುನಕ್ಕೆ ಬರ್ಪ[2]ಮವೆಯೊಳ್ ಚಿಹ್ನಂಗಳಾದಂದು ನೀಂ |
ಮುದದಿಂ ಕೊಂಡಿಡು ಸರ್ವಧಾನ್ಯ ಲವಣ ವ್ರಾತಂಗಳಂ ಮಾಱೆ ಕೊ ||
ಳ್ವುದು ಷಣ್ಮಾಸದೊಳಕ್ಕುಮಿರ್ಮಡಿ ಫಲಂ ತಪ್ಪಿಲ್ಲದೆಂದಿಂತು ಮಾ |
ಱಿದ [3]ನೋಡೆಂಬುದನೊಲ್ದು ಬಣ್ಣಿಸುವಿನಂ ಸಮ್ಯಕ್ತ್ವರತ್ನಾಕರಂ || ೧೯ ||

ಕಂ|| ಆಸಡಿಯಮವಾಸೆಯೊಳೀ |
ದೋಸಂ ಪುಟ್ಟಿದೊಡೆ [4]ತೈಲ ಮಧು ಘೃತ ಗಂಧಂ ||
ಲೇಸೆನಿಪ ಪರದು ದುಃಗುಣಂ |
ಮಾಸದ್ವಯದಿಂದಮಕ್ಕು ಮರ್ಹದ್ದಾಸಾ || ೨೦ ||

ಉ|| ಶ್ರಾವಣದಂದಿನೊಂದಿದಮವಾಸೆಯೊಳೀ ಕುಱುಪಾದೊಡೆಲ್ಲಮಂ |
ಭಾವಿಸಿ ಹೇಮ ತಾರ ಮಣಿಮೌಕ್ತಿಕ [5]ಸನ್ನಹವಸ್ತ್ರ ವಾಜಿಯಂ ||
ಬೀವರ ವಸ್ತುವಂ ಪಿಡಿದು ಮಾಱಿದೊಡಿಮ್ಮಡಿಲಾಭಮಕ್ಕು ಮು |
ರ್ವೀವಳಯ ಪ್ರಸಿದ್ಧಮುದು ಪಂಚಮಮಾಸದೊಳಿಂತು ನಿಶ್ಚಯಂ || ೨೧ ||

1 ಭಯಮು ಮಕ್ಕುಂ. 2 ಮವಾಸೆಯೊಳೀ ಚಿಹ್ನಂ, ದರ್ಶಕ್ಕೀ ಚಿಹ್ನಂ, ಬಪ್ಪಡಮಾವಾಸೆಯೊಳ್. 3 ನೋಡೀಬುಧ. 4 ತೈಲ ಘೃತ ಮಧುವುಗಳಂ. 5 ಸನ್ನನಾಸ್ತ್ರವಜಿಯೆಂಬೀ, ವಸ್ತ್ರವಾಜಿ ವಸ್ತ್ರವೆಂಬೀ.

* ಆಷಾಢದಮವಾಸೆಯೊಳೀ ಕುಱುಪಾದೊಡೆ ತೈಲ ಘೃತಂ ಮಾಱುಗುಂ ।
ಕ್ರಮದೊಳುಲಾಭಂ ಮೂಱನೆಯ ತಿಂಗಳೊಳ್ ಯಿಮ್ಮಡಿ
ಲಾಭಮಕ್ಕು ಮೆಂದಪಂ ಕಮಲಪಂ ನ್ಯೆಯಮಣಿ ಜೈನಪದಾಂಬುಜನಪ್ಪ ಱಟ್ಟಿಗಾ ॥
—ಎಂಬ ಅಶುದ್ಧ ಕಂದವೊಂದು ಪ್ರತಿಯಲ್ಲಿದೆ, ಇದು ಗ್ರಂಥಪಾತದಿಂದಾದ ಪ್ರಮಾದವು.

ಚಂ|| ಅಮರ್ದಿರೆ [1]ಭಾದ್ರ[ಮಾಸ]ದಮವಾಸೆಯೊಳೀ ಕುಱಿಪಾಗೆ ಲೋಹಮಂ |
ಚಮರಿಯ ನೆಯ್ದ ಕರ್ಬುನದ ಮುಟ್ಟುಗಳಂ ಪಿಡಿದಿರ್ದು ಮಾಱು [2]ನೀಂ ||
ಕ್ರಮದೊಳೆ ಲಾಭ ಮಾಱನೆಯ ತಿಂಗಳೊಳಿರ್ದಡಿಯಕ್ಕು ಮೆಂಬುದಂ |
ಕಮಲಭವಾನ್ವಯದ್ಯುಮಣಿ ಜೈನಪದಾಂಬುಜ(ಭೃಂಗ)ನಲ್ತೆ ಅಟ್ಟುಗಾ(ಗಂ)||೨೨||

ಚಂ|| ತೊಲಗಿಯಿದ್ದೈದಿ ದಾಶ್ವಯುಜದಂದಮವಾಸೆ[3]ಯೊಳಾದ ಚಿಹ್ನದೊಳ್ |
ಸಲೆ ಮಣಿ ನೂಲ್ ಸಣಂಬೆಸೆವ ಕಂಬಳಿ ಕುಂಕುಮ ಮೇಣ್ ಕುಸುಂಬೆಯುಂ ||
ವಿಲಸಿತ [4]ಧಾನ್ಯಮಂ ದೊರಕಿಸಿಂ ಮಿಗೆ ಕಾಂಸ್ಯಮ ನೋಡಿ ಬಯ್ತು ನೀ |
ನಲಸದೆ ಮಾಱಲಾಱನೆಯ ತಿಂಗಳೊಳಿರ್ದಡಿ [5]ಅಟ್ಟನಿಷ್ಟದಿಂ || ೨೩ ||

ಉ|| [6]ಊರ್ವಿಪ ವೃಶ್ಚಿಕಕ್ಕೆ ರವಿ ಬರ್ಪಮವಾಸೆಯೊಳೀ ನಿಮಿತ್ತಮಂ |
ದುರ್ವಿಗೆ ತೋಱೆ ಮೂಲಫಲ ಕಂದಮನುತ್ತಮ ರತ್ನಜಾತಿಯಂ ||
ಸರ್ವಮ[7]ನೊಲ್ದು ಸಂಗ್ರಹಿಸಿ ಮಾಱಿದೊಡಬ್ದದೊಳುಂಡು ತಿಂದು ಮ |
ಯ್ಯೂರ್ವರ ಭಾಗ್ಯದಂತೆ ಪರದಿರ್ದಡಿ ಪೆರ್ಚುಗು [8]ಮಕ್ಷರಪ್ರಿಯಾ || ೨೪ ||

ಉ|| ಪಂಕಜಮಿತ್ರನುಂ ಧನುಗೆ ಬರ್ಪಮವಾಸೆಯೊಳಿ(ಳೆ)ನಿಮಿತ್ತದಿಂ |
ಕುಂಕುಮ ಶಂಖ ವಿದ್ರುಮಸುಮೌಕ್ತಿಕಮಂ ಪಿಡಿದಾಱು ತಿಂಗಳೊಳ್ ||
ಭೋಂಕನೆ ಮಾಱೆ ಕೊಳ್ಗೆ [9]ದು(ದ್ವಿ)ಗುಣದ್ಧಿಯನೀಗುಮದೆಂಬು ಧಾತ್ರಿಯೊಳ್ |
ಪಂಕಜಗರ್ಭವಂಶತಿಲಕಂ ಪ್ರಭು ಪೇೞ್ದುದು ತಪ್ಪಲಕ್ಕುಮೇ || ೨೫ ||

ಮಂಗಳಂ|| ಮಕರ ಕುಂಭಕಿನ ಸೆಯ್ತುರಿ ಬರ್ಪಮವಾಸೆಯೊಳ್(ಳಂ) |
ಸಕಲ ಲೋಹ(ಕ) ಬಹುಧಾನ್ಯ[10]ಮನರ್ಜಿಸಿ ಬಯ್ತು ನೀಂ ||
ಸುಕದೆ ಮಾಱೆ ಕೊಳೆ ಮಾಸದೊಳಿರ್ದಡಿ ಲಾಭಮಂ |
ಪ್ರಕಟಕಂ ಪರದುಗೆಯ್ವ ವಣಿಕ್ಯಾ(ಗ್ಯು)ತರ್ಗೆಲ್ಲಿಯುಂ || ೨೬ ||

ಮಣಿವಿಭೂಷಣಂ|| ಸಂದ ಮೀನಕಿನ ನೆಯ್ತುರೆ ಬರ್ಪಮವಾಸೆಯೊಳ್ |
ಕಂದ ಮೂಲ ಫಲ ಲೋಹದ ಭಾಂಡಸುಗತ್ನಮಂ ||
ಕುಂವದೋಸರಿಸಿ ಮಾಱಿದೊಡಾಱನೆ ತಿಂಗಳ |
ಪ್ಪಂದೆ ತಾಂ ಪಡೆಗು ಮಿರ್ದಡಿ ಪೆರ್ಚಿದ ಲಾಭದಿ(ಮ)ಂ || ೨೭ ||

ಕಂ|| ಈ ಪೇೞ್ದಮವಾಸೆಗಳೊಳ್ |
ಪಾಪಿಗಳೊಡ[11]ಗೂಡಿ ನಡೆಯೆ ಕುಂದುಗುಮರ್ಥಂ ||
[12]ಪಾಪೇತರರೊಡನಿರೆಯುಂ |
ಕೋಪಂ ಕೆಟ್ಟಿರ್ದು ನೋಡೆ ಪೆರ್ಚುಗುಮರ್ಥಂ || ೨೮ ||

---

1 ಭಾದ್ರಪದದಮ. 2 ಗೀ, ಗುಂ. 3 ಯೊಳೀ ಕುಱಿಪಾಗೆ ಬೇಗದೊಳ್. 4 ಧಾನ್ಯಂದಸ(ಸಿ)ರಿಯಂ ಮಿಗೆ ವಾಸಮನೋಡಿ ಬೈಚಿಡು, ಮಿಗೆ ಕೊಂಡು ನೋಡಿ ಬೈತುಗುನಲ. 5 ಲಾಭಮಾಗದೇ. 6 ಪೂರ್ವಿಪ. 7 ನೊಳ್ಕು. 8 ಸಾಕ್ಷರ. 9 ದ್ವಿಗುಣ ವೃದ್ಧಿಯ. 10 ಮನುಪಾರ್ಜಿಸಿ. 11 ನಾಡಿ 12 ಕೂರ್ಪವರೊಡ ನಿರೆಯುಂ ತಾಂ ಪಾಪಂ.

ಕಂ|| ಮತ್ತಮಮಾವಾಸೆಗಳೊಳ್ ಪಖೂ |
ವತ್ತು ದಿನಂಗಳನೆ ಕಂಡೊಡೊಳ್ಳಿತು ದಿನಮಂ ||
ತೊತ್ತಿದೊಡೆ ಕುಸಿಗುಮಿಟಾದಂ |
ತೊತ್ತಿರಿಸುಗು ಮರ್ಘಮೆಂದ ನೊಳ್ಪಿನ ಅಟ್ಟಂ || ೨೯ ||

(ಇಂತಮಾವಾಸ್ಯೆಯೊಳಾದಿತ್ಯಬಿಂಬದೊಳಾದ ಪರಿವೇಷಾದಿಗಳಂ ನೋಡಿ ಪೇಳ್ದರ್ಘಖಂಡಂ)

೨. ಪುಣ್ಣಮೆಯೊಳಾದ ಪರಿವೇಷಾದಿಗಳ ಲಕ್ಷಣನಿಮಿತ್ತಂ

ವ|| ಇನ್ನು ಪುಣ್ಣಮೆಯ ಲಕ್ಷಣಮಂ ಪೇಳ್ವೆಂ—

ಮ|| ಸ್ರ|| ಪರಿಘಂ ನಿರ್ಘಾತಮುಳ್ಕ(ಲ್ಕ)ಂ ಸುರಧನು ಬಡಪಂ [1]ಪಕ್ಷವಾತಂ [2]ತಮೌಘಂ |
ಪರಿವೇಷಂ ದೀರ್ಘಧೂಮಂ ನುತರಜವರುಷಂ ಭೂಮಿಕಂಪಂ ತಮಂಧಂ ||
ಖರಶೀತಾಂಶು[3]ಪ್ರಣಾದಂ ಭಗಣಮುದಿರ್ವ ಪೇರಾಲಿಕಲ್ಲೆಂಬ ಚಿಹ್ನಂ |
ನೆರೆಯಲ್ ಮಾಸಂಗಳೊಳ್ ಪುಣ್ಣಮೆಯೊಳಱದು ಪೇಟರ್ಘಮಂ
ಅಟ್ಟಗಾಂಕಾ || ೩೦ ||

ಉ|| ನೋಡಿರೆ ಚೈತ್ರದಂದೆಸೆವ ಪುಣ್ಣಮೆಗೊಂದಿದ ಚಿಹ್ನಮಾಗೆ ಕೊ |
ಳ್ಗಾ(ಳ್ಗೋ)ಡುವ ಕಾ(ದು)ಡುವಾಯೆಡೆಗೆ ಬಾಲ್ತೆ(ರ್ತೆ)ಯ ಮುಟ್ಟುಗಳಂ
ಕೃ(ತ್ರಿ)ತಂಗಳೊಳ್ ||
ಕೂಡಿದ ವಸ್ತ್ರ [4]ಗಂಧಮುವ ಪಿಂಗದೆ ನೀಂ ಪಿಡಿದಿರ್ದು ಮಾಱೆ ಕೆ |
ಯ್ಗೂಡುಗು ಮೂಱು ತಿಂಗಳೊಳೆ ನಾಲ್ವಡಿಲಾಭಮುಮಕ್ಷರಪ್ರಿಯಾ || ೩೧ ||

ಮ|| ವರವೈಶಾಖದ ಪೂರ್ಣಮಪ್ಪ ದಿನದೊಳ್ ಚಿಹ್ನಂಗಳಂ ಕಂಡೊಡಾ |
ದರದಿಂ ಪಟ್ಟೆ ಕುಸುಂಬೆಯಂ ಪೆಸಱನಾ ಕಾಶ್ಮೀರಮಂ ವ್ರೀಹಿಯಂ ||
ನೆರಪುತ್ತೊಯ್ಯನೆ ಮಾಱು [5]ಗೆಂಟನೆಯ ತಿಂಗಳ್ಗೆಂದಿದಂ ಮಾಱೆನಲ್ |
ನಿರುತಂ ಲಬ್ಧಮನೆಟ್ಟನೆಂದುದೆ [6]ನಯಂ [7]ಶ್ರೀ ಅಟ್ಟಕಂದರ್ಪನಾ || ೩೨ ||

ಉ|| ಸನ್ನುತ ಜ್ಯೇಷ್ಠ ಪೂರ್ಣ(ಮಿಯೊಳೀ) ದಿನದೊಳ್ ಕುಱಪಾದೊಡೆ ಸರ್ವಧಾನ್ಯಮಂ |
ಮನ್ನಿಸಿ ಕಂದಮೂಲಫಲಸಂಕುಲಮಂ ಪಿಡಿದಿರ್ದು ಮಾಱೆ ಲಾ ||
ಭನ್ನಿಜಮಕ್ಕು ಮಾವರುಷ ದರ್ಘದೆ ನಾಲ್ವಡಿ ತಪ್ಪಸಲ್ಲದೆಂ |
ದ[8]ನ್ನಯ ಬಂಧು [ಮಿತ್ರ] ಜನವತ್ಸಲನಾಗಮತತ್ವಕೋವಿದಂ || ೩೩ ||

ಕಂ|| ಸಂದಾಷಾಢದ ಪೂರ್ಣಮೆ |
ಗ(ಗೆ)ಂದಿನ ಚಿಹ್ನಂಗಳಾಗೆ ಜವೆಯಂ ನೆಲ್ಲಂ ||
ಕುಂದದೆ [9]ಪೂರಿಸೆ ಕಾರ್ತಿಕೆ |
ಯಂದಿಗೆ(ನ) ಮಾಱಂಗೆ ಮಾಱೆ(ಱು) ಮುಮ್ಮಡಿ[10]ಲಾಭಂ || ೩೪ ||

---

1 ಮತ್ಸ್ಯ. 2 ತಮ ಉರ್ಗ್ರಂ. 3 ಪ್ರಮಾಣಂ. 4 ವಂಗಮುವಸಂಗದೆ ಪಿಡಿದುರ್. 5 ಗೆಯ್ದನೆಯ. 6 ದಯಂ. 7 ಶ್ರೀಶಿಷ್ಟಕಲ್ಪದ್ರುಮಾ || 8 ನ್ನಯಂಬಡೆ ನಾಗಕುಮಾರ ಜಾಣನೋಜೆಯಂ. 9 ಜೋಡಿಸಿ. 10 ಯಕ್ಕುಂ, ಅಟ್ಟಾ.

ಕಂ|| ಶ್ರಾವಣದಂದಿನ ಪುಣ್ಣಿಮೆ |
ಗಾವರ[1]ಸಿರಿ ಕಱುಪು ಕಂದ [2]ಮೂಲ ಘೃತಂಗಳ್ ||
ಮೂವಡಿಯಕ್ಕುಂ ತಿಂಗಳೊ |
ಳಾವಗಮೆಳ್ಳೆಣ್ಣೆವೆರಸು ಅರ್ಘ[3]ವೆಡಂಗಾ || ೩೫ ||

ಚಂ|| ಜಗಕೆಸೆದಿರ್ಪ ಭಾದ್ರಪದ ಪೂರ್ಣದಿನಕ್ಕವು ತೋಱಿ ಬೆಳ್ಳಿಗ[4] |
ಟ್ಟಿಗೆ ಪೊಸಮುತ್ತು ವಜ್ರವೆಸೆವಾಯುಧಮಲ್ಲಿಗೆ ತಕ್ಕ ಮುಟ್ಟು ಭಂ ||
ಡಿಗಳೊಳೆ ತಕ್ಕ ಜಂತ್ರವಿವ ನೋಸಂಸಿಟ್ಟುವನೆಂಟುತಿಂಗಳೊಳ್ |
[5]ಒಗುಮಿಗೆ ಲಾಭಮಕ್ಕು ಮಱು ನಾಲ್ವಡಿ ನೆಟ್ಟನೆ ಅರ್ಘನಿಷ್ಟದಿಂ || ೩೬ ||

ಉ|| ಮೇದಿನಿಗೊಪ್ಪುವಾಶ್ವಯುಜ ಪೂರ್ಣದಿನಕ್ಕೆಯು ಚಿಹ್ನಮಾದೊಡಿಂ |
ಬಾದ ವಿಶೇಷಮಾಗಱುದು ಭಾವಿಸಿ ನೆಟ್ಟನೆ ಪೇೞ್ದ [6]ಮಾಟಕ್ಕೆಯಿಂ ||
ಗೋದುವೆ [7]ಯೆಳ್ಳು ಪುದ್ದು ಕೊರೆ ತುಪ್ಪಮನಾರ್ಜಿಸಿಟ್ಟು ಮಾ |
ಱಾದಿನ ನಾಲ್ಕುತಿಂಗ[8]ಳೊಳಗಯ್ವಡಿ ಲಾಭಮನುಂಟುಮಾಡುಗುಂ || ೩೭ ||

ಚಂ|| ಅತಿಶಯಮಪ್ಪ ಕಾರ್ತಿಕದ ಪುಣ್ಣಿಮೆಯೊಳ್ ಕಱುಪಾಗೆ ವಸ್ತ್ರಮಂ |
ನುತ ಬಹುಧಾನ್ಯಮಂ ಪೊದೆವ ಕಂಬಳಿಯಂ ಸಲೆ [9]ಬಲ್ಲನಂಬನಾ ||
ಯುತ ಗುಣಪಣ್ಯಮಂ ಪಿಡಿದು ಮಾಱದೊ[10]ಡಾಱುತಿಂಗಳಿಂಗದಂ |
ಸ್ಥಿತಿಗತಿಯಿಂದಮಯ್ವಡಿಯ ಲಾಭಮ[11]ನೀಗು(ಗೆ) ಜಗಕ್ಕೆ ನಿಶ್ಚಯಂ || ೩೮ ||

ಉ|| ಒಪ್ಪುವ ಮಾರ್ಗಶೀರುಷದ ಪುಣ್ಣಿಮೆಯೊಳ್ ಕಱುಪಾಗೆ [12]ಕಂಂಠಿಯಂ |
ತುಪ್ಪಮನುಪ್ಪು ಜೀನ ಘೃತಸರ್ಕರೆಯಂ ಪಿಡಿದಿರ್ದು ಮಾಱಿಕೊಳ್ ||
ತಪ್ಪದೆ ಮೂಱುತಿಂಗಳೊಳೆ ಲಾಭಮನುನ್ನತಮುಂಟುಮಾಡುಗುಂ |
[13]ನಿಪ್ಪಡಮಲ್ಲದಿರ್ಪ ಪರದಂಗೆ ಧನಂ ಕಿಡದಂತೆ ನಿಶ್ಚಯಂ || ೩೯ ||

ಉ|| ಅಮರ್ದಿರೆ ಪುಷ್ಯಪೂರ್ಣೆ[14]ಮೆಯೊಳಂ ನಯಮಂತತಿಶುದ್ಧಮಪ್ಪ ಕುಂ |
ಕುಮಮನಪೂರ್ವಮಪ್ಪ ಫಲಮಂ ತೊಗರಂ ಮಿಗಿಲಪ್ಪ ಬಣ್ಣಮಂ ||
ಸಮನಿಸ ಗಂಧವಸ್ತುಗಳನಾದರದಿಂ ಪಿಡಿದಿರ್ದು [15]ಮಾಱಲಾ |
ಕ್ರಮದೊಳಗಕ್ಕು ಮೂಱನೆಯ ತಿಂಗಳೊಳಯ್ವಡಿ ಲಾಭಮುತ್ತಮಂ || ೪೦ ||

ಉ|| ಭೂನುತ ಮಾಘಪೂರ್ಣಿಮೆ[16]ಯೊಳೀದಿನದೊಳ್ ಕಱುಪಾದೊಡೆ ಸರ್ವಧಾನ್ಯಮಂ ||
ಮಾನಿತ [17]ಪುಪ್ಪ ತುಪ್ಪವೊಳಗಾಗಿರೆ ಸರ್ವರಸಂಗಳೆಂಬಿವಂ ||
ತಾನೊಡಗೂಡಿ ಬಯ್ತು ಮಿಗೆ ಮಾಱದೊಡಂ[18]ತವುವಯ್ದು ತಿಂಗಳೊಳ್ ||
ಜೈನಪದಾಬ್ಜ ಭೃಂಗ(ವರ)ಮುಕನಿಷ್ಟದೆ ನಾಲ್ವಡಿಯಕ್ಕು ಮುರ್ವಿಯೊಳ್ || ೪೧ ||

---

1 ಸಿದ. 2 ಮೂಲಂ ಘೃತಮುಂ. 3 ನ ಮತದಿಂ. 4 ಟ್ಟ(ಟ್ಟು)ಗೆ. 5 ಬಗೆಮಿಗೆ, ಉಗುಮಿಗೆ. 6 ಮಾರ್ಗದಿಂ. 7 ಬೇಳೆ ಪುರ್ದು, ಬೆಲ್ಲ ಪುರ್ದು ಕೋರೆಯೆಳ್ಳು ತುಪ್ಪವ, ಯೆಳ್ಳು ತುಪ್ಪ ತೊವರಿಯೆಂಬಿ ನರ್ಜಿಸಿಟ್ಟು ನಿಂತಾದೊಡೆ. 8 ಳೊಳೆ ನಾಲ್ವಡಿಲಾಭಮನೆಂತು ಮಾಣಿಕುಂ. 9 ಬಲ್ಲನಾಯತಗುಣಂ ಪಿಡಿಹು. 10 ಡಾಱು ತಿಂಗಳಿಂಗೆ, ಡಾಱನೆ ತಿಂಗಳೊಳ್. 11 ನಿಭುವನಕ್ಕೆ. 12 ಪೂರಿಸಾ. 13 ಪೊಪ್ಪದೆ ಪರದಂಗೆ. 14 ಮೆಯ ದಿನದೊಳ್. 15 ಮೂಱೆ ಶಾಸ್ತ್ರದೊಳಕ್ಕು. 16 ಯ ದಿನದೊಳ್. 17 ಉಪ್ಪು. 18 ತವು ತಿಂಗಳಯ್ದಱೊಳ್ ನಾಲ್ವಡಿಲಾಭಮಕ್ಕುಮೆಂದಱಿಪಿದಂ ಸಾಹಿತ್ಯರತ್ನಾಕರಂ.

ಚಂ|| ವಸುಧೆಗೆ ಸಂದ ಫಾಲ್ಗುನದ ಪೂರ್ಣಿಮೆಯೊಳ್ ಕುಱಿಪಾಗೆ ಗಂಧಮಂ |
ಮಿಸುಗುವ ಕಾಂಸ್ಯಮಂ ಫಲಸಮೂಹಮನೊಳ್ಪಿತು [1]ಕಂದಮೂಲಮಂ ||
ಬಿಸುಡದೆ ಬಯ್ತು ಮಾಱಿದೊಡೆ ತಪ್ಪದು ತಾಂ ದಿಟಮೇೞುತಿಂಗಳೊಳ್ |
ಪುಸಿವರ ಶೂಲನೆಂದ ತೆಱದಿಂ ಪರದಿರ್ಮಡಿಯಾಗೆ ಪೆರ್ಚುಗುಂ || ೪೨ ||

ಉ|| ಈಗ್ರಹ ಮೀನ(ಮಿನ್ನ)ಮೆಂದವಱೊಳಾದ ನಯಂ ನಯಸಂಕುಲಂಗಳ |
ವ್ಯಗ್ರಮನಸ್ಕನಾಗಿ ಯವಧಾರಿಸಿ ಲಾಭಮಲಾಭಮೆಂದು ಪೇ ||
ೞ್ಗ್ರಹಮುಯ್ದು ಮೊಂದೆಡೆಯೊಳಿರ್ದೊಡೆ ಧಾತ್ರಿಗೆ ಸರ್ವಹಾನಿಯೆಂ |
ದಾಗ್ರಣಿಯಾಗಿ ಪೇೞ್ ಕವಿಗಳಾಭರಣಂ ಪ್ರಭು ಪೇೞ್ದ ಮಾೞ್ಕೆಯಿಂ || ೪೩ ||

ಕಂ|| ಈ ಪೂರ್ಣಚಂದ್ರನಂ ಶುಭ |
ಪಾಪಂಗಳ್ ನೋಡೆ ಕೂಡೆ ಲಾಭಮಲಾಭ ||
ವ್ಯಾ[2]ಪಾರಮನಱಿದಱಿವುಗೆ |
ಸೋಪಾಯಮಿದೊಂದೆ ಸರಿಸಮಾದೊಡೆ ಸರಿಸಂ || ೪೪ ||

ಪುಣ್ಣಿಮೆ ಕುಸಿದೊಡೆ ಕುಸಿಗುಂ |
ಪುಣ್ಣಿಮೆ ಪೆರ್ಚಿದೊಡೆ ಪೆರ್ಚುಗುಂ ನಡೆವರ್ಘಂ ||
ಪುಣ್ಣಿಮೆ ತಾಂ [3]ಸರಿಯಾಗಲ್ |
ಬಿನ್ನಣಮೇಂ ನಡೆವರ್ಘಮೆಂದ ನೊಳ್ಪಿನ ಬಟ್ಟಂ || ೪೫ ||

(ಇಂತು ಪುಣ್ಣಿಮೆಯದಿನದುತ್ಪಾತಂಗಳಂ ನೋಡಿ ಪೇೞ್ದರ್ಘಖಂಡಂ)

### ೬. ವರ್ಷಾಧಿಪತಿ ಫಲಂ

ವ|| ಇನ್ನು ವರ್ಷಾಧಿಪತಿಯ(ಗಳ) ಫಲಂಗಳಂ ಪೇೞ್ವೆಂ—

ಚಂ|| ರವಿ ವರುಷೇಶನಾಗೆ ಮೞೆ ಸ್ವಲ್ಪಮೆ ಕುತ್ತಮುಳುಂಬ ಮರ್ಘ[4]ಮಾ |
ಗವು ಖಳರೋ(ಡಗೂ)ಡುವರ್ ಮಡಿವರೊಳ್ಪರಸರ್ಕ[5]ಳತೀವ (ಧೀಶ) ರೊಕ್ಕಲಾ ||
ಡುವ ರತಿದುಃಖಮುಕ್ಕು ಮೞೆಯುಂಟು ಪಲರ್ಗೆ ಕಳಂಕವುಂಟು ಮಾ |
ಭುವನದೊಳಯ್ದೆ ಪೇೞ್ದಗಡ ಬಟ್ಟಕವೀಂದ್ರನ ಪೇೞ್ದ ಮಾೞ್ಕೆಯಿಂ || ೪೬ ||

ಚಂ|| ಎಸೆವ ಹಿಮಾಂಶುವಬ್ದಪತಿಯಾಗೆ ಧರಾಮರರ್ಗೊಳ್ಪಿತಕ್ಕು ಮಾ |
ಪಸು ಕಱೆಗುಂ ಖಳರ್ ಕಿಡುಗು [6]ಮಿೞ್ದಿಗಳಾಗವು ಭೂಪರೆಯ್ದೆ ಪಾ ||
ಲಿಸುವರಿಳಾಗ್ರಮಂ ಮೞೆಗಳೊಳ್ಪಿದುವಪ್ಪುವು [7]ಬೆಳ್ಪೆ ಪೆರ್ಚುಗುಂ |
ವಸುಮತಿ ಕರ್ವು ನೆಲ್ ಕಬ್ಬಿವೆ ಗೋದುವೆ ಜೋಳದೊಳೊಪ್ಪಿ ತೋಱುಗುಂ || ೪೭ ||

ಮ|| ಧರಣೀಜಂ ವರುಷೇಶನಾಗೆ ಮೞೆಯಿಲ್ಲಂ ಬೇಗ ಮರ್ಘಕ್ಷಯಂ |
ಮರುತಂ ಪೆರ್ಚುಗುಮಕ್ಕು ಮುಗ್ರರುಜೆಯುಂ ದಾರಿದ್ರ್ಯಮುಂ [8]ದುಃಖಮುಂ ||
ವರುಷಂ ಸ್ವಲ್ಪಮೆ ಧಾನ್ಯಮಿಲ್ಲ [9]ಪಸುಗಳ್ ಪಾಲೀಯವನ್ನಾಯಮುಂ |
ಪಿರಿದಕ್ಕುಂ ಜಗಕೆಯ್ದೆಯೆಂದುದೆ ನಯಂ ತಾಂ ಬ್ರಹ್ಮವಂಶೋದ್ಭವಂ || ೪೮ ||

---

1 ಪೂವುಮೂಲ, ಗಂಧಮೂಲ. 2 ಜೀವರಮನಾದವುಗೆ ಸೋಪಾ. 3 ಸರಿದಿನಮಾಗಳ್ ಮುನ್ನಮ್. 4 ಮಾಗೆ ದುಃಖಳರೋಡುವರ್. 5 ಳತಿ ವರಕಿರೋಡುತ ರತಿದುಃಖಮುಕ್ಕು. 6 ಮಿೞ್ತು. 7 ಬೆಳೆ, ಬೆಳಸು. 8 ಕುತ್ತಮುಂ. 9 ಪಸುಗಳುಂ ತಾಂ ಪಾಡಿದನ್ನಾಯಮುಂ ಪಿರಿದುಂ ಪೆರ್ಚುಗು ಧಾತ್ರಿಗೆಂದು ದನಯಂ ತಾಂ ಕೃಷ್ಣವಂಶೋದ್ಭವಂ.

ಉ|| ಸೋಮತನೂಭವಂ ವರುಷವಲ್ಲಭನಾಗೆ [1]ಯನೇಕವೃಷ್ಟಿಯುಂ |
ಭೂಮಿಪರೇಳಿಗೆಯುಂ ಪ್ರಜೆಗೆ ಸಂತಸಮುಂ ಧನಧಾನ್ಯವೃದ್ಧಿಯುಂ ||
ಕಾಮನ ದರ್ಪಮುಂ ಸತಿಯರೊಟ್ಟಜೆಯುಂ ಯತಿಗಳ್ಗೆ ಮೋಕ್ಷ[2]ಮುಂ |
[3]ಕ್ಷೇಮದಿನಕ್ಕುಮಾಪರದಗಂ ದ್ವಿಜರ್ಗಂ ಶುಭಮಕ್ಕುಮೆಲ್ಲಿಯುಂ || ೪೯ ||

ಚಂ|| ಗುರು ವರುಷೇಶನಾಗೆ ಮಟಿಯುಂ ಬೆಳೆಯು(ಸು)ಂ ಶುಭಮುಂ ಸುಭಿಕ್ಷಮುಂ |
ನರಪತಿಪಾರ್ವರು[4]ನ್ನತಿಕೆಯುಂ ಧನಧಾನ್ಯ ಸಮೂಹವೃದ್ಧಿಯುಂ ||
ಕರಮೆಸೆಗುಂ ಖಳರ್ ಕಿಡುಗುವಾಗಮ ಕೋವಿದರ್ಗೊಳ್ಳಿತಕ್ಕು ಮು |
ರ್ವರೆಗನುರಾಗದಿಂ ವಿವಿಧಭೋಗಮುದಕ್ಕು ಮದುತ್ತರೋತ್ತರ(ಮು)ಂ || ೫೦ ||

ಮ|| ಅಸುರೇಜ್ಯಂ ವರುಷೇಶನಾಗೆ ಬೆಳಸುಂ [5]ಶಿಲ್ಪಿವ್ರಜಂ ಪೆರ್ಚುಗುಂ |
ಪಸುವೆಲ್ಲಂ ಕಱಿಗುಂ ಖಳರ್ [6]ಕಿಡುವರು(ರಿ)ಂ ಧರ್ಮಂಗಳಂ ಮಾಡುವರ್ ||
ವಸುಧಾಧೀಶರ ಭೂತಳಂಗಳೊಳೆ ಸಂತೋಷಂಗಳಂ ಪೆರ್ಚಿಪರ್ |
ಕುಸುಮಾಸ್ತ್ರಂಗಧಟಕ್ಕು ಮಂತಧಿಪರಾ ವ್ರಾತಕ್ಕಮುತ್ಸ್ಯುತ್ಸವಂ || ೫೧ ||

ಚಂ|| ರವಿಜಾತಂ ವರುಷೇಶನಾಗೆ ರುಜೆಯುಂ ಪೆರ್ಗಾಳಿಯುಂ ಬಾಧೆಯುಂ |
ಕವರ್ವರ್ ಕುಟ್ಟುವರೆಂಬ ದುರ್ವ್ಯಸನಮುಂ ಕೇಡುಂ ಮನಸ್ತಾಪಮುಂ ||
ಭುವನಕ್ಕಗ್ಗಳಮಕ್ಕು ಮಿಲ್ಲ ಮಟಿಯುಂ ಧಾನ್ಯಂಗಳುಂ ಪಾಪಮು |
ದ್ಭವಿಕುಂ ಜೈನಮತಕ್ಕೆ ನಾಡೆ ಶುಭದಂ ಪೆರ್ಚಕ್ಕುಮೆಲ್ಲಂದದಿಂ || ೫೨ ||

(ಇಂತು ವರ್ಷಾಧಿಪತಿ ಫಲಂ)

### ೪. ಸೂರ್ಯಮಾನ ಫಲಂ

ವ|| ಇನ್ನು ಸೂರ್ಯ (ನಮಾಸದ) (ವಿ)ಮಾನದ ಫಲಮಂ ಪೇಟ್ವೆಂ—

ಕಂ|| ಅಹಮಃಹಿಯ(ಯಿ)ನಾಳ್ದ ನಾನಾ |
ಗ್ರಹಮುಂ ಮೇಣ್ ವರುಷಪತಿ ಶುಭಗ್ರಹಮಾಗಲ್ ||
ಮಹಿಗೆ ಶುಭಾಶುಭಮೆಂದೀ |
ಮಹೀಶರುತ್ಪಾತಸಮಿತಿಗೆಲ್ಲಂ ಶುಭದರ || ೫೩ ||

ಸಂತತಮೇಷಾದಿಯೆ ಮಿಾ |
ನಾಂತಂ ಚೈತ್ರಾದಿ ಫಾಲ್ಗುಣಾಂತಂ ಸಮಸಂ ||
ದಿಂತು ಬರೆ ರಾಶಿಮಾಸಂ |
ಭ್ರಾಂತೇನನಿತರ್ಕಮಲ್ಲಿ ಸೂರ್ಯನೆ ಮುಖ್ಯಂ || ೫೪ ||

ಮೂನೂಱುಱುವತ್ತೈರಡಹ |
ಮಾಸಾಟಿಕೆ ಘಟಿಗೆ ನೆಱಯೆ ಮೂವತುಮೂಱು ||
ಕ್ಯಾನಂದದಿನುದಯಿಸುಗೆಂ |
ದೀನಯದಿಂ ಸೂರ್ಯಮಾನಮೊಲ್ಪಿನ ಅಟ್ಟಾ || ೫೫ ||

---

1 ಯುಮಧಿಕ. 2 ಮುಂ ನರಪರು ಪಾರ್ವರು ಸಂತೋಷಂ......ಕ್ಷಮಂ (ಎರಡು ಪದ್ಯಗಳ ಭಾಗಗಳು ಸೇರಿವೆ). 3 ಕ್ಷಮೆಯು ತಪ್ಪವುಂ. 4 ನ್ನತಿಯುಂ ಧಾನ್ಯಸಂಮೃದ್ಧಿಯಾಗಿಯುಂ. 5 ಶಿಲ್ಪಿಜಲಂ. 6 ಮಡಿವರು.

ಕಂ|| ಮೂನೂಱಿ[3]ಪ್ಪತ್ತೆರಡಱ |
ಮಾನಂ[1]ದಲ್ ಸೂರ್ಯಮಾನ ತಪ್ಪದು ಮತ್ತಂ ||
ಮೂನೂಱತೊಂಬತಱದೊಳ್ |
ಮಾನಾಳಿ ದಿನಪ್ರಮಾಣಮಾದೊಡೆ ಮುಖ್ಯಂ || ೫೬ ||

ಮಾನಪ್ಪ ಚಂದ್ರಮಾನಂ |
ಮೂನೂಱಱುವತ್ತುನಾಲ್ಕು[2]ದಿವಸದೊಳಕ್ಕುಂ ||
ತಾ[3]ನೆಂದನಿದಂ ಸುಕವಿನಿ |
ಧಾನಂ ರವಿಚಂದ್ರಮಾನಮಂ ಪ್ರಕಟಿಸುಗುಂ || ೫೭ ||

ಉ|| ಮೂವತುತಿಂಗಳಂದಿನ(ರವಿ)ಸುತಂ ಗುರು ಪನ್ನೆರಡಂ ಫಣೀಂದ್ರನುಂ |
ಭಾವಿಸಲಿಪ್ಪತಂ ಶಶಿಜಭಾರ್ಗವ ಭಾಸ್ಕರರೊಂದು ತಿಂಗಳಂ ||
ಭೂವಿಜನೊಂದು ತಿಂಗಳರೆಯುಂ ದಿವಸದ್ವಯಮಂ ತ್ರಿಪಂಚನಾ |
ಡ್ಯಾವಳಿಯಂ ಶಶಾಂಕನೊಸೆದಿರ್ಕುಮನಿಂದಿತರಾಶಿರಾಶಿಯೊಳ್ || ೫೮ ||

ಕಂ|| ತಿಂಗಳೊಳರ್ಗುಱದ ದಿನಮಂ |
ಭಂಗಿಯ ಪದಿಮೂಱುಗೂಡಿ ಮಂಗಳವೆತ್ತಾ ||
ತಿಂಗಳ ಋಕ್ಷೆಯನೆಣಿಸುಗೆ |
ಪಿಂಗದೆ ತದ್ದಿನದ ರಿಕ್ಷೆ ಬರ್ಕುಂ ಱಟ್ಟಾ || ೫೯ ||

ಶತಪತ್ರಬಾಂಧವಂ ರೇ |
ವತಿಯಿಂದಶ್ವನಿಗೆ ಬರ್ಪ ಸಂಕ್ರಾನ್ತಿಯೆ ಸಂ ||
ಯುತಮಾಗೆ ಬಂದೆ ಕಾಲಂ |
ಕ್ಷಿತಿಯೊಳ್ ಕರಣಾಧಿನಾಥನಕ್ಕುಂ ಱಟ್ಟಾ || ೬೦ ||

ಕ್ಷಿತಿಗೆಸೆವ ಚೈತ್ರಶುದ್ಧದ |
[5]ಪ್ರತಿಪದೆಯೊಳ್ ನೆರೆದ ವಾರಮಂ ಭಾವಿಸೆ ಸಂ ||
ನುತಗುಣ ವರ್ಷಾಧಿಪನೆಂ |
[6]ದತಿಶಯದಿಂ ಪೇೞ್ದಿ ನಯುಮನಾಪ್ತರಮತದಿಂ || ೬೧ ||

(ಇಂತು ಸೂರ್ಯ(ವಿ)ಮಾನ ಫಲಂ)

ಇಂತು ವೃಷ್ಟ್ಯಘಾರ್ಧ್ಯಾಯಂ ಷಷ್ಠಂ ೬ ಸಮಾಪ್ತಂ.

---

1 ಧಂಡೆ. 2 ವೇಶ. 3 ನೆಂದುವೆಂದು. 4 ಳಿಂಗಿಗ. 5 ಪ್ರಕತಿಯೊಳಂ. 6 ಯಶ್ಚದಿ.

# ಜ್ಯೌತಿಷಾಧ್ಯಾಯಂ ಸಪ್ತಮಂ ೭

## ೧. ಪನ್ನೆರಡು ಯುಗಂಗಳ ಪ್ರಭಾವದಿಂ ಷಷ್ಟಿವರ್ಷಂಗಳ ಫಲಂ

ವ|| ಇನ್ನು ಪನ್ನೆರಡು ಯುಗಂಗಳ ಪ್ರಭಾವದಿಂ ಷಷ್ಟಿವರ್ಷಂಗಳ ಫಲಮಂ ಪೇೞ್ವೆಂ—

ಕಂ|| ಸಂದ ಶಕವರ್ಷಮಂ ಪ |
ನ್ನೊಂದಱೊ[1]ಳಱಿದತ್ತ ನಾಲ್ಕಱಿಂ ಗುಣಿಯಿಸು ನೀಂ ||
[2]ನಿಂದೇೞುಸಾಸಿರದಯ್ದೊ |
ಱಿಂದಂ [3]ಕಳೆ ಯೆಂಬತೆರಡುಗೂಡಿಂ ಬೞಿಯಂ || ೧ ||

ಕಂ|| ಗಗನಶರ ಸಪ್ತಾನಲ(೩೭೫೦)ಸಂ |
ಖ್ಯೆಗಳಿಂದಂ ಕೊಂಡು ಪಡೆದುವಂ ಶಕನೊಳ್ ಕೂ ||
ಡುಗೆ ಬೞಿಕಱುವತ್ತಱಿಂದೆ |
ತ್ತುಗೆ ಶೇಷಂ ಭವಭವದೆ ವಷಂ ಬರ್ಕುಂ || ೨ ||

*ಅಱುವತ್ತಬ್ದಂಗಳ ನ |
ಯ್ದಱ ಭಾಗಂಗೊಂಡು ಪಡೆದ ಲಬ್ಧಂ ಯುಗಮೆಂ ||
ದಱಿವುದದರ್ಕಧಿದೇವತೆ |
ಯಱಿದಿಶ್ಯಾಂದ್ರಿ (ದ್ವಾಯಿಜ್ಯ) ಶಕ್ರ ಬಲಭೃಜ್ಜ್ವಲನರ್ || ೩ ||

ತ್ವಷ್ಟಂ [4]ಮ್ಯೃಷ್ಟಬಳಂ ಪೃಥು |
ವಿಷ್ಟಪರಿವೇಷ [5]ಸೋಮ ಶುಕ್ರಾ ನ(ನಿ)ಲ ಸಂ ||
ತುಷ್ಟ ಭಗದೇವರಾಳ್ವರ |
ಭೀಷ್ಟದೆ ಪನ್ನೆರಡು ಯುಗಮುಮಂ ಕ್ರಮದಿಂದಂ || ೪ ||

---

1 ಕಿರದಂತು. 2 ತಂದೆಲ್ಲ ಸುಂಸಿ. 3 ಕಡೆ. 4 ವೃಷ್ಟೆಪಿತ್ತು. 5 ಮಾಸತ್ರಯ ಯನಳ.

* ಒಂದು ಪ್ರತಿಯಲ್ಲಿ ಅಶುದ್ಧಗಳೂ, ಲುಪ್ತಭಾಗಗಳುಳ್ಳವೂ ಆದ ಈ ಸಂಸ್ಕೃತ ಶ್ಲೋಕಗಳೂ, ಟೀಕೆಯೂ, ಒಂದು ಚಿತ್ರವೂ (ಇದನ್ನು ಪರಿಶಿಷ್ಟ ೧-ರಲ್ಲಿ ಕೊಟ್ಟಿದೆ) ಇರುವುದು—

ಇಂದು ಬಿಂಬತ್ರಯಂ ಸೂರ್ಯ ದೀರ್ಘರೇಖಾಚತುಷ್ಟಯಂ ।
ಅಶ್ವಿನ್ಯಾದೀನಿ ಋಕ್ಷಾಣಿ ತತ್ರ ಸಂಸ್ಥಾಪಯೇತ್ ಕ್ರಮಾತ್ ॥ ೧ ॥
ಊರ್ಧ್ವಗದ(ಗ)ಂ ಶುಭದಂ ಪ್ರೋಕ್ತಮಧೋ ಋಕ್ಷಂ ಚ ನಿಂದಿತಂ ।
ಗ್ರಹೇತು ಚಂದ್ರರೇಖಾಯಾ............ಕರ್ಣಕಾ ॥ ೨ ॥

ತದ್ರೇಖಾ......... ರಾಜವಿನಿರ್ದಿಶೇತ್ ।
ಅಂ......... ಬುಧೆ ಪುತ್ರ ವಿನಾಶಃ ಸ್ಯಾತ್ .........ಗೋಹಾನಿ ॥
ಮಂದೇ ವೇಶ್ಮವಿನಾ .........ದ್ವೈಧಿ । ಚಂದ್ರಮಾಯಾವಿನಿರ್ದಿಶೇತ್ ॥

ಟೀ॥ ಊರ್ಧ್ವ ನಕ್ಷತ್ರದಲ್ಲಿ ಚಂದ್ರನಿದ್ದರೆ ವೇಧೆಯಿಲ್ಲ ಉೞಿದ ಗ್ರಹಂಗಳಿದ್ದಡೆ ವೇಧೆ, ಹೀಗೆ ಚಕ್ರವ ಬ.........ವದು ಚಂದ್ರ .........ಯ ಕಟ್ಟುವುದು. .........ದಲ್ಲಿ ಕಟ್ಟಲಾಗದು. ......ತ್ರವಲ್ಲಿ ಚಂದ್ರನಿದ್ದರೆ ಒಳ್ಳೆಯದು.

ಒಂದು ಪ್ರತಿಯಲ್ಲಿ ಈ ಗದ್ಯವಿದೆ—

ಅಱು[ವತ್ತ] ಲಬ್ದಂಗಳನಯ್ದಱಿಂ ಭಾಗಂಗೊಂಡು ಪಡೆದ ಲಬ್ಧಂ ಯುಗಮೆಂದಱಿವುದು.

ಕಂ|| ಮೊದಲುತ್ತಮಬೀಸಿಗೆಯಿಂ |
ದುದಯಿಸುಗುಂ ನಾಲ್ಕುಯುಗಮುಂ ಪ್ರಭವಾದ್ಯ(ಬ್ದ)ಂ ||
ಮೊದ[1]ಲ್ಲಿ ಚಿತ್ರವರ್ಷಂ |
ಪುದಿದಿರ್ದ ಜಗಕ್ಕೆ ಮುಗ್ರ[2]ವಾತಮುಮುಕ್ಕುಂ || ೫ ||

ವಿಭವಾದಿಯ ನಾಲ್ಕಬ್ದಂ |
ಪ್ರಭೂತ ವರ್ಷಂ ಜಗ(ನ)ಕ್ಕೆ ಶುಭದಮುದಕ್ಕುಂ ||
ಭೂಭುಜರ್ಗಂ ಪರಮೋತ್ಸಹ |
[3]ನಾಭಿಯ ಪಂಕೇಜ ಭವಭವಂವಿರಚಿಸಿದಂ || ೬ ||

ಎರಡನೆಯ ಯುಗಕೆ(ದ) ಮೊದಲಾಂ |
ಗಿರವತ್ಸರಮಾದಿಯಾಗಲಯ್ದುಬ್ದಮುವುಂ ||
ಕರಮೊಳ್ಳಿದುವು ಸುಭಿಕ್ಷಂ |
[4]ಧರೆಗೆ ಧೆಂಾಮುರರರ್ಗೆಲ್ಲಮುತ್ಸಹಮುಕ್ಕುಂ || ೭ ||

ನಿರುತಂ ಮೂಱನೆ ಯುಗಕೀ |
ಶ್ವರಾಬ್ದ [5]ಮೊದಲಾದುವಯ್ದು ಸಂವತ್ಸರಮುಂ ||
ಕರಮುತ್ತಮ ಮವಱಂತ್ಯದೊ |
ಳೆರಡಬ್ದಂ ವ್ಯಾಧಿಪೀಡೆಯುಂ ಪುಟ್ಟೆ(ಘಟಯಿ)ಸುಗುಂ || ೮ ||

ನಾಲ್ಕನೆಯ ಯುಗಕ್ಕಾದಿಯೆ |
ನಲ್ಕಾದುದು ಚಿತ್ರಭಾನು ಸಂವತ್ಸರದೊಳ್ ||
ಸಿಕ್ಕಿರ್ಗೆಲ್ಲ ಪ್ರಜೆಗೆ ಶುಭದಂ |
ದಲ್ಕವಿಕಂಜಭವಭವನ ಮತ ತಪ್ಪುಗುಮೇ || ೯ ||

ಅಂತಾ ನಾಲ್ಕನೆಯ ಯುಗಾ |
ಭ್ಯಂತರದ ಸು(ಸ್ವ)ಭಾನು ಮಧ್ಯಮಂ ಮಟೆಗಾಲಂ ||
ಸಂತತ ರುಜೆಯುಕ್ಕುಂ ಪೆಱ |
ತೇಂ ತಾರಣದೊಳ್ ಸುಭಿಕ್ಷ ಮರಸಿಂಗಕ್ಕುಂ || ೧೦ ||

ತ್ರಿಪದಿ|| ಪಾರ್ಥಿವಹಾಯನದೊ[6]ಳರ್ಥಮಾಗವು ಕೂರ್ತು |
ಪಾರ್ಥಿವರ್ ಪ್ರಜೆಯ ನಱ(ಡ)ಸುವರ್ ಧರೆಗೆಲ್ಲಂ |
ಪ್ರಾರ್ಥಿಸಿದಂತೆ ಮಟೆಯುಕ್ಕುಂ || ೧೧ ||

ಕಂ|| ಬಾಧೆಯು ನಯ್ದನೆಯ ಯುಗ |
ಕ್ಕಾದಿಯೆನಲ್ ನೆಗಟ್ದ ಸರ್ವಜಿತುವೆಂಬೆರಡುಂ ||
ಮೇದಿನಿಗೆ ಶುಭಮನೀಗುಂ (ಕೇ) |
ಡಾದಿ(ಧಿ)ಯ[ನಿಳೆಗೀ]ನೀಗುವಮುಟಿದ ಮೂಱುಂ ಬರಿಸಂ || ೧೨ ||

1 ಲವಿಚಿತ್ರಮೆವರ್ಷಂ ಪುದಿದರ್ಥಂ. 2 ಪಾತಕ. 3 ಮಂದ(ಡ) ಭಯ(ವ) ಕವಿಕಂಜಸಂಭವಂ.
4 ಪ್ರಜೆಗೆ ದರಮಾರ್ಗಂ ಕೊಡೆ. 5 ದೊಳಗಾಗೆ. 6 ಳನರ್ಥಮಾವು.

ಕಂ|| ಸಂದಾಱನೆಯ ಯುಗಾದಿಯ |
ನಂದನ ಸಂವತ್ಸರಾದಿ ನಾಲ್ಕಬ್ದಂಗಳ್ ||
ಮುಂದೆವರುಷಂಗಳಕ್ಕುಂ |
ಮುಂದಣ [1]ದುರ್ಮುಖಿ ಕನಿಷ್ಠಮುಕ್ಕುಂ ಱಟ್ಟಾ || ೧೩ ||

ಯುಗದೇೞಕ್ಕಾದಿಯೆನಲ್ |
ನೆಗೞ್ದಿ ದರ್ಾ ಹೇಮಳಂಬಿಸಂವತ್ಸರ(ದೊಳ್)ದಾ ||
ಪುಗಿಲೊಳ್ ಮೞೆ ಕೊಳ್ಗುಂ ವ್ಯಾ |
ಧಿಗಳಿಂ ಸಾವಕ್ಕು ಕೇಡು ಮತ್ತದಱಂತ್ಯಂ || ೧೪ ||

ಎಂದುಂ ಶರ್ವರಿವತ್ಸರ |
ದಿಂದರ್ಘಂ ಕಿಱಿದು ಕುಂದುಗುಂ ಫಲದಿಂದಾ ||
ನಂದದೆ ಕರಮೆ ಸುಭಿಕ್ಷಂ |
ಬಂದುತ್ತಮಮುಕ್ಕುಮಮಲಜಿನನಗರಪತೀ || ೧೫ ||

ಮ|| ಶುಭಕೃದ್ವತ್ಸರ[2]ಮಾದಿ ಯೆಂಟಱಯುಗಕ್ಕಾವತ್ಸರಾದಿದ್ವಯಂ |
ಶುಭಮುಕ್ಕುಂ ಪ್ರಜೆಗೆಲ್ಲ ಮೂಱನೆಯ ವರ್ಷಂ ಕ್ರೋಧದೊಳ್ ಮಂಡಲ ||
ಕ್ಕೆ ಭಯಂ ಪುಟ್ಟುಗು ಮತ್ತನಾಲ್ಕನೆಯ ವಿಶ್ವಾಸಾಬ್ದದೊಳ್ ಮಧ್ಯಮಂ |
ವಿಭವಕ್ಕುಂ ದ್ವಿಜರ್ಗೆಂದು ಪೇೞ್ದನಭಯಂ ಸಮಸ್ತ್ವ ರತ್ನಾಕರಂ || ೧೬ ||

ತ್ರಿವಿಧಿ|| ಭುವನಜನಕ್ಕೆ ಗೋನಿವಹಕ್ಕೆ [3]ಪೊಲ್ಲ[ದು |
ಸವಸಿ]ಕ್ಕು[4]ವಗ್ನಿ ಭಯಮಕ್ಕುರ್ವಿಗೆ ಪಱಾ |
ಭವಮೆಂಬ [ಕೊನೆಯ] ವರುಷಕ್ಕೆ || ೧೭ ||

ಕಂ|| ಯುಗದೊಳ್ ಕನಿಷ್ಠ ಬೀಸಿಗೆ |
ಪುಗುಮಾದಿಯೊಳಂ ಪ್ಲವಂಗ ಸಂವತ್ಸರದೊಳ್ ||
ಜಗಕ್ಕನಿಷ್ಟಂ ಮತ್ತಾ |
ಯುಗದೊಳಗಣ ನಾಲ್ಕುವರ್ಷಮುಂ ಜಗಕೆ ಶುಭಂ || ೧೮ ||

ಧರೆಯೊಳ್ ಪತ್ತನೆಯ ಯುಗಾಂ |
ತರ ಪರಿಧಾವಿಯ ಮೊದಲವರುಷ ಮನಲಭ[5]ಯಂ (ತಾಂ) ||
ಪಿರಿಯ ಮೞೆಯಿಲ್ಲ ಪೊಲ್ಲದು |
ಧರಣೀಪತಿಗಳ್ಗೆ ಮಧ್ಯದೇಶವಿನಾಶಂ || ೧೯ ||

ಡಾಮರಮಕ್ಕುಂ ಕೆಚ್ಚನೆ |
[6]ಯಾಮಿನ ತದ್ವರ್ಣಬೀಜಫಲತತಿ ಕಿಡುಗುಂ ||
ನೋವಕ್ಕುಂ ಪ್ರಜೆಗಗ್ಗಳ |
ವಿಾ ವಸುಧೆಗೆ ಪೇೞ್ ಪ್ರಮಾಥಿ ಸಂವತ್ಸರದೊಳ್ || ೨೦ ||

1 ಮಿಕ್ಕಿರ್ಗನಿಷ್ಟ. 2 ಮಾದಿಯಾಗಿ ವಿಶ್ವಾಸಾಬ್ದದೊಳ್ ಮಧ್ಯಮಂ, ವಿಭವಕ್ಕುಂ ದ್ವಿಜರ್ಗೆಂದು ಯುಗಕ್ಕಾವತ್ಸರಾದಿದ್ವಯಂ (ಎಂದು ಪಾದಗಳು ಹಿಂದುಮುಂದಾಗಿವೆ). 3 ಸೊಗಮನಿಕ್ಕುಂ. 4 ವಾಕಸ್ಮಿಕ ಮಕ್ಕು ಮಗ್ನಿಭಯಮಕ್ಕು ದೇಶಕೆ. 5 ಯಾದ್ಯಂ. 6 ಪುದ್ರಾವಿಯ ಮೊದಲು ವರ್ಷವಿನ ತದ್ವರ್ಣ,

ಕಂ|| ಆನಂದಾಬ್ದದೆ(ದೊಳಂ) ಪ್ರಜೆಗ |
ಳ್ಗಾನಂದಂ ಪಿರಿದಕ್ಕುಮೆಸೆವ ನೆಲಕ್ಕಂ ||
ತಾನೆ ಮುಟಿಯಕ್ಕು ಸುಕವಿನಿ |
ದಾನಂ ಪೇಟ್ದಂದದಿಂದಮೊಳ್ಪಿನ ಬಟ್ಟಂ || ೨೧ ||

ತ್ರಿವಿಧಿ|| ರಾಕ್ಷಸಾಬ್ದದೊಳ್ ಪಾಪಕ್ಷಯಮಕ್ಕುಂ ಮ |
[1]ತ್ತಾಕ್ಷೋಭಿ(ತ್ತೀಕ್ಷಿ)ಸಿದಂತೆ ಬೆಳೆಗುಂ [2]ಗ್ರೀಷ್ಮಚ್ಛವಿಯೊ |
ಳೀಕ್ಷಿತಿವಳಯದೊಳೆಲ್ಲಂ || ೨೨ ||

ಕಂ|| ನಳಸಂವತ್ಸರ[3]ದೊಳ್ ಮುಂ |
ಘಟಿಲೆನೆ ಮನುಜರ್ಗಮಧಿಕತೃಷೆ ತಾನಕ್ಕುಂ ||
ಇಳೆಯೊಳಿದು ತಥ್ಯವೆಂದುಂ |
ಸಲೆ ವಿನಯಾಂಭೋಧಿಯೆನಿಪ ಬಟ್ಟನ ಮತದಿಂ || ೨೩ ||

ಒಂದನೆ ಕೇಳ್ ಪೇಟ್ವೆಂ ಪ |
ನ್ನೊಂದನೆ ಯುಗಕಾದಿಯಪ್ಪ ಪಿಂಗಳದೊಳ್ ಕಾ ||
ರ್ಗೆಂದು ಮುಟಿಯಿಲ್ಲ ಕಳ್ಪರ್ |
ಕುಂದರ್ ದನುಕಂಪೆಮೆಂಬ ಮತ್ತಂಬಕರ್ಗಂ || ೨೪ ||

ಎರಡನೆಯ ಕಾಲಯುಕ್ತಿಗೆ(ಕ್ತಾ) |
ಪಿರಿದೋಂದಾದೋಷಮಕ್ಕು ಬೆಳಸುಗಳಕ್ಕುಂ ||
ಪರಮಾರ್ಥಂ ಸಿದ್ಧಾರ್ಥಂ |
ಪರಿವರ್ತನಮೊಂದು ಕಾಲಮೊಳ್ಪಿದುವಕ್ಕುಂ || ೨೫ ||

ತ್ರಿಪದಿ|| ಕ್ಷಿತಿಯೊಳ್ ರೌದ್ರಾಬ್ದಂ ಬಂದಲ್ಲಿ ರೌದ್ರ(ಭಯ)ಂ ದು |
ರ್ಮತಿಯೊಳೆ ಮಧ್ಯ(ಮ)ಂ ಮುಟಿಯಕ್ಕುಮೆಂದು ಸ |
ನ್ಮತಿ ಪೇಟ್ದಂ [4]ಜಿನಪಪ(ದ)ದಾಸಂ || ೨೬ ||

ಕಂ|| ಸಾರಂ ದುಂದುಭಿರುಧಿರೋ |
ದ್ಗಾರಿಯೊಳಂತ[5]ಕನ ಬಾಧೆ ಭೂಭುಜರಿಜೀವರ್ ||
ನೇರಿತ್ತು ಬೆಳೆಯದಿಂತು ಧ |
ರಾವಳಯಕ್ಕಜೀಯೆ ಪೇಟ್ದನೊಳ್ಪಿನ ಬಟ್ಟಂ || ೨೭ ||

ತ್ರಿವಿಧಿ|| [6]ಭಾವಿಸೆ ಕೇಳ್ ರಕ್ತಾಕ್ಷಿಯೊಳೆ ಭೂವಳಯಕೆ(ತಿ)ಕಷ್ಟಂ |
ಸಾವಕ್ಕುಂ ಬೆಳಸು ಪಿರಿದಿಲ್ಲ [7]ದುರ್ಭಿಕ್ಷ |
ತಾವಧಿಕವೆಂದ ಬಟ್ಟಯ್ಯಂ || ೨೮ ||

---

1 ತ್ತಾಕ್ಷೇಪಿಸಿದಂತೆ. 2 ಗ್ರೀಷ್ಮೋತ್ಸವವೀಕ್ಷಿಸಿ ವಳಯದೊಳಗೆಲ್ಲ. 3 ಮುಂ ನಿಲೆ ನೆಲಕೆಲ್ಲಂ ತಾಪಂ ಕ್ಷುಧೆ(ದ್ಪ)ಯಂಮಂತೆ ಘನಮಕ್ಕು ನಿ। ಶ್ಚಲವಸ್ತ್ರ ಭ(ಜ)ಯಮುಮ(ಮಾರಿಯ)ಕ್ಕುಂ ಸಲೆ. 4 ಜಿನದಾಸಂ, ಪದಪೂಜಿತಾ. 5 ತನ್ನ. 6 ಈಕ್ಷಿಸಿ ಪೇಟಿಲ್ ರಕ್ತಾಕ್ಷಿವತ್ಸರಂ ಪ್ರಜೆ। ಗೆ ಕ್ಷಯವಕ್ಕು ಬೆಳಸಿಲ್ಲ ಪಿರಿದು ಬು। ಭುಕ್ಷೆ ಕರಮಕ್ಕು ಜಗಕೆಲ್ಲಂ (ಎಂಬ ಪಾಠವಿದೆ). 7 ಭೂಮಿಯವಕ್ಕು ಕ್ಷಿತಿಪರ್ ಮುಡಿವರ್.

ತ್ರಿವಿಧಿ|| ಕ್ರೋಧನಾಬ್ದದೊಳೆ ತಾಂ ಕ್ರೋಧದಿಂ ದೇಶಕ್ಕೆ |
ವ್ಯಾಧಿಗಳಕ್ಕು ಕ್ಷಯ ಸಂವತ್ಸರದಿಂ ಧ |
ರಾಧಿಪರ್ಗೆಯ್ದೆ ಕ್ಷಯಮಕ್ಕುಂ || ೨೯ ||

ಅರಸರ್ಗೆ ಜಯವಕ್ಕು ಪರದರ್ಗೆ ಪಾರ್ವರ್ಗೆ |
ಕರಮೊಳ್ಳಿತಕ್ಕು ಪುಸಿಯಲ್ಲ ಕ್ಷಯ ಸಂವ |
ತ್ಸರದೊ[1]ಳ್ ತಾನೆಂದ ಜಟ್ಟಣ್ಣಂ || ೩೦ ||

(ಇಂತು ಪನ್ನೆರಡು ಯುಗಂಗಳ ಪ್ರಭಾವದಿಂ ಷಷ್ಟಿವರ್ಷ ಫಲಂ)

### ೨. ಗ್ರಹಂಗಳ ಪಗೆಕೆಳೆಗಳ್

ವ|| ಇನ್ನು ಗ್ರಹಂಗಳ [2]ಪಗೆಕೆಳೆಯುಂ (ಶತ್ರು ಮಿತ್ರತ್ವಮಂ) ಪೇೞ್ವೆಂ—

ಕಂ|| ಶಶಿ(ಜ)ಕುಜಮಂದ ಗುರು ಕವಿ |
ಶಶಿ ದಿನಕರ ರಾಹು ಕೇತು [3]ಮೂಲಕ್ರಮದಿಂ ||
ವಿಶದಂ ಬಲ್ಲದರೆಂದುಂ |
ವಿಶೇಷದಿ(ಮ)ಂ ಬಲಮುವರ್ಕೆ ಸಮನಿಸೆ ಬರ್ಕುಂ || ೩೧ ||

ಭಾನುಗೆ ಗುರು ಗುರುಗೆಯುಂವಿ |
ಳಾನಂದನನುೞಿಯೆ ಉೞಿದರೆಲ್ಲರ್ ಕೆಳೆ ಭೂ ||
ಸೂನುಗೆ ಬುಧಭೃಗುಜರ್ಕಳ್ |
ಭಾನುವೆ ಪೊಱಗಾಗೆ ಯಿಂದುಸೂನುಗೆ ಕೆಳೆಯರ್ || ೩೨ ||

ಗುರು ಕುಜ ಬುಧ ಶನಿ ದಾನವ |
ಗುರುಗೆಂದುಂ ಕೆಳೆಯರಿಂದುಗಿಂದುಜ ಗುರುಗಳ್ ||
ದೊರೆವೆತ್ತ ಕೆಳೆಯರಿಂದುಜ |
ಗುರು ಭಾರ್ಗವಜರ್ ಕುಜಂಗೆ ಕೆಳೆಪಗೆಯಿಲ್ಲಂ || ೩೩ ||

(ಇಂತು ಗ್ರಹಂಗಳ ಪಗೆ ಕೆಳೆಗಳ್)

### ೩. ರಾಶಿ ವಿಘಳಿಗೆ

ವ|| ಇನ್ನು ಒಂದೊಂದು ಲ[4]ಗ್ನಕೆನಿತು ವಿಗೞಿಗೆಗಳುದಯಂಗೆಯ್ವುವೆಂಬುದಂ ಪೇೞ್ವೆಂ—

೨೪೫ ೨೭೪ ೩೧೨ ೩೨೫ ೩೩೪ ೩೧೧
ಉ|| ಮಾವರ ಭಾಸುರಂ ರಟಗಿ ಮಾರಗೆ ಭಾಗಲೆ ಕೋಕಿಲಂಗಳಂ |
ಭಾವಿಸೆ ಮೇಷದಿಂ ತೊಲೆಯನೆಯ್ದು ವಿನಂ ತೊಲೆಯಿಂದೆ ಮಾನಮುಂ ||
[5]ತಾವೊಸೆದೆಯ್ದು ವನ್ನಮುವರುಣ್ಬ ವಿನಾೞಿಗಳೆಂದು ಪೇೞ್ದನು |
ರ್ವೀವಳಯ ಪ್ರಸಿದ್ಧಕವಿ ಪನ್ನೆರಡುಂ ಗೃಹಕಂ ಪ್ರಮಾಣದಿಂ || ೩೪ ||

(ಇಂತು ರಾಶಿ ವಿಘಳಿಗೆ)

---

1 ಳಗೊಂಡನೆಯ ಬಂದು. 2 ನೈಸರ್ಗಿಕಮುಂ. 3 ಮೂರ್ಧ್ವ. 4 ಗ್ನಮೆನಿತು ವಿಗೞಿಗೆಗಳನೊಂದು ದೆಂಬುದಂ. 5 ಓವರೆಯುಯ್ದುಂನ್ನೆ ವರಮುಂಬವಿನಾೞಿ.

### ೪. ಗ್ರಹಂಗಳಾಳ್ವ ಭೂಮಿ

ವ|| ಗ್ರಹಂಗಳಾಳ್ವ ಭೂಮಿಯಂ ಪೇೞ್ವೆಂ—

ಕಂ|| ಹಿಮಶೈಲಗಂಗೆಯೆಡೆಯಂ |
ಕಮಳಪ್ರಿಯಸೂನು ನೆಗೞ್ದ ಗಂಗಾನದಿಯಿಂ ||
ದಮರ್ದಿರೆ ವಿಂಧ್ಯಂಬರೆಗಂ |
ಹಿಮಕರಸುತನಾಳ್ಗುಮೆ(ಳ್ವನೆ)ಂದ ನೊಳ್ಪಿನ ಬಟ್ಟಂ || ೩೫ ||

ವರವಿಂಧ್ಯದಿಂದೆ ಗೋದಾ |
ವರಿವರಮಾಂಗಿರಸನೆಸೆವ ಗೋದಾವರಿಯಂ ||
ನಿರುಪಮಗುಣ ಪೆರ್ದೊಱೆವರ |
ಮರಸಂ ಪ್ರಖ್ಯಾತ[1]ಭೃಗು ತನೂಭವನಾಳ್ಗುಂ || ೩೬ ||

ಆ ಪೆರ್ದೊಱೆಯಿಂ ಲಂಕಾ |
ದ್ವೀಪಮನೆಯ್ದುವಿನಮೆಡೆಯ ನಾಡುಗಳಂ ಧಾ ||
ತ್ರೀಪುತ್ರನಾಳ್ಗುಮೆಂದು ಮ |
ಹಾಪುರುಷರ್ ಪೊಗೞೆ ಪೇ(ನೆಗ)ೞ್ದ ನೊಳ್ಪಿನ ಬಟ್ಟಂ || ೩೭ ||

(ಇಂತು ಗ್ರಹಂಗಳಾಳ್ವ ಭೂಮಿ)

### ೫. ಗ್ರಹನೆಲೆ

ವ|| ಇನ್ನು ಗ್ರಹನೆಲೆಯ ಫಲಮಂ ಪೇೞ್ವೆಂ—

ಕಂ|| ಬುಧಗುರು ಪೊಡನಿರೆ ಮಱೆಯು |
ತ್ಯಧಿಕಂ ಭಾಸ್ಕರನ ಕುಜನ ಮಂತ್ರಿಯ ವಿಳಸ ||
ದ್ಬುಧನನಳವಡಿಸೆ ಶುಕ್ರಂ |
ಬುಧನಿಂದಂ ಮುಂದೆ ನಡೆಯಲೊಳ್ಪಱೆಯುಕ್ಕುಂ || ೩೮ ||

ಭೂಮಿಜನುಮರ್ಕಸುತನುಂ |
ತಾಮೊಸೆದೊಂಡೆಡೆಯೊಳಿರ್ದರಪ್ಪೊಡೆ ಜಗದೊಳ್ ||
ಕ್ಷಾಮವಣಿ ಮಾಡುಗುಂ ಸಂ |
ಗ್ರಾಮಮುಮೊಡರಿಸುಗುಮರಸುಮಕ್ಕಳ್ಗೆಲ್ಲಂ || ೩೯ ||

†ಎಂ[2]ಡುಮಿರೆ ಕದಡುಗುಂ (ಧರೆ) ಮೂ |
ಱಿರೆಯುಂ ಭೂಭುಜರ್ಗೆ ಕೇಡು ಪುಟ್ಟುಗು(ಗೆ) ಮತ್ತಂ ||
ದಿರದೊಡನೆ ನಾಲ್ಕು ನಿಂದೊಡೆ |
ಧರೆ ಕಿಡುಗುಂ ಮೂಱುಲೋಕ[3]ಮಯ್ದಿರೆ ಕಿಡುಗುಂ || ೪೦ ||

1 ಭೃಗುಜಾತನಾಳ್ದಪಂ ಪ್ರಖ್ಯಾತಂ. 2 ಡುಂ ಗ್ರಹಮಿರೆ ಕಿಡುಗುಂ ಧರೆ ಮೂಱಿರೆ ನೃಪರ್ಗೆ. 3 ತಾಂ ನಿಶ್ಚಯದಿಂ. * ಈ ಎರಡು ಕಂದಗಳೂ ಒಂದು ಪ್ರತಿಯಲ್ಲಿಲ್ಲ.

†ಒಂದು ಪ್ರತಿಯಲ್ಲಿ ಈ ಕಂದಾರ್ಥವನ್ನು ಕೊಡುವ ಸಂಸ್ಕೃತ ಶ್ಲೋಕಗಳಿವೆ—
ದ್ವೌ ಗ್ರಹೌ ನೃಪಸಂಕ್ಷೋಭಂ ತ್ರಯೋ ಹಂತಿ ನರಾಧಿಪಂ ।
ಚತ್ವಾರೋ ರಾಜ್ಯನಾಶಾಯ ಹನ್ಯಾತ್ ಪಂಚ ಜಗತ್ತ್ರಯಂ ।
(ಷಡ್ಗ್ರಹಾಶ್ಚ ಮಹಾವಾಯುಃ ಸಪ್ತಕಂ ತು ಜಲಪ್ಲವಂ ॥)

ಕಂ|| ಒಂದೆರಡು ಮೂಱು ನಾಲ್ಕ |
ಯ್ದೊಂದೆಣಿಸಲ್ ತಾರೆ(ಲ್ಕಾಱ್)ಯು[1]ಯ್ದು ಬಂದಂಶದೊಳ ||
ಕೇಳಂದು ಫಣಿ ಸಹಿತಮಾ ಮೞೆ |
ಯಿಂದಂ ಜಗವೞಗು ಮೇ(ಱು)ಕಗ್ರಹಮಿರೆ ಬೆಳೆಗುಂ || ೪೧ ||

ಗುರು ಶುಕ್ರ ಚಂದ್ರರೊಡನಿರೆ |
ಪಿರಿದುಂ ಮೞೆಯುಕ್ಕು ಮಿನನ ಸೌಮ್ಯನ ನಡುವಿಂ ||
ಭರದೆ ಭೃಗು ನಡೆಯೆ ವಿಶ್ವಂ |
ಭರೆಯು ಜನಂ ನೀರನಱಸಿ ತಿಱ್ರನೆ ತಿರಿಗುಂ || ೪೨ ||

ಅಸುರಗುರು ಮಂತ್ರಿ ಬುಧನೊಡ |
ನೆಸಗ(ಸೆಯು)ಲ್ ಮೞೆಯುಕ್ಕು ಮವನಿಸುತನಿಂ ಶನಿಯುಂ ||
ಮುಸುರಾಗಿ ಪರೆಗುಮವನಿಜ |
ಬಿಸರುಹ ಮಿತ್ರ(ನ)ಂ ಸುರೇಜ್ಯನಿರೆ ಬಱನಕ್ಕುಂ || ೪೩ ||

ತೋಟಕಂ|| ಗುರುಶೌರಿಸಮಾಗಮದೊಂದು ಗಡಾ |
ಪಿರಿದಂಜುವುದಂಜುವುದಂದು ಗಡಾ ||
ವರುಷತ್ರಯ ಧಾನ್ಯವ[2]ಮಾಡು ಗಡಾ |
ಹರನಾದೊಡೆ ಕಾಯಲುಮಾಱ ಗಡಾ || ೪೪ ||

ಕಂ|| ಕುಜ ಗುರು ಶನಿ ಭೃಗುವಿಂದುಜ |
ಗಜರಾಶಿಗೊಂದೆಡೆಯೊಳಿರ್ದೊಡಕ್ಕುಂ ಬಱನುಂ ||
ದ್ವಿಜೇಶನಿ(ರ್ದೊಡೆ)ರೆ ರೋಹಿಣಿಯೊಳ್ |
ನಿಜದಿಂ ವಕ್ರಿಪೊಡೆ ಮೊಕ್ಕಳಂ ಬಱನಕ್ಕುಂ || ೪೫ ||

ಸುರಮಂತ್ರಿಯು ಮವನಿಜನುಂ |
ನೆರೆದೇಕ ಗೃಹಸ್ಥರಾದೊ[3]ಡುಗ್ರಾಹವದೊಳ್ ||
ನರಪಾಲರಿಱಿದು ಕಾದುವ |
ರರಿದಕ್ಕುಂ [4]ಧಾನ್ಯಚಯಮುಮರ್ಘದ್ದಾ ಸಾ || ೪೬ ||

ರವಿಯುಂ ಕುಜನುಂ ಪುಗಿಲೊಳ್ |
ರವಿಜಾಮೃತರುಚಿಗಳಂತ್ಯದೊಳ್ ಭೃಗುಶಶಿಜರ್ ||
ಭವನಂಗಳ ನಡುವಿರಲುಂ |
ದಿವಿಜೇಜ್ಯಂ ತನ್ನ ಫಲಮನಲ್ಲಿಯೆ [5]ಕುಡುಗುಂ || ೪೭ ||

---

1 ಪೊಂದೆ ಶಂಖದೊಳರ್ಕೆರಡು ಫಣಿಸಹಿತಮೊ ವೇಳೆಯಿಂದಂ ಜಗವಳಿಗುಂ, ಯಿಾ ಕ್ರೂರಗ್ರಹವಿರೆ ಬೆಳಗುಂ. 2 ಮಡಗುಗಡಾ ಮೃಡನಾದೊಡೆ ಕಾಯಲಿ ನೆಱೆಯಗಡಾ. 3 ಡಂ ಗ್ರಹದೊಳಿಂ ನರರೆಲ್ಲಂ ಪಾಮರತೊಲು ಧರಣಿಯೊಳಂ ತಿರುಗುತಿರ್ಪ ಮರ್ಘ. 4 ಧಾನ್ಯಕ್ಷಯಮು ಜಟ್ಟಿಕವೀಂದ್ರ. 5 ಯಿಾಗುಂ, ಯಿಾಯ್ಗುಂ.

ಕಂ|| ಗುರು ಶುಕ್ರಾಂಗಾರಕರೊ |
ಬ್ಬುಳಿ(ವರ) ನಿಂದೆಡೆ ಗೊರ್ವರೊರ್ವರೞಿೊಳ್ ನೆಲಸೆ ಬೞಿಂ ||
ಗುರುವಾ ನಕ್ಷತ್ರಮನತಿ |
ಭರದಿಂದುರ್ಚಿದೊಡೆ ಮೞಿ ಸವಿಸ್ತರವಕ್ಕುಂ* || ೪೮ ||

ಗುರುವುಂ ಶೌರಿಯು ಮೊಬ್ಬುೞಿ |
ನೆರೆದಿರ್ದೊಡೆ ಮೂಱುವರ್ಷಮರ್ಘಂ ಕಿಡುಗುಂ ||
ಭರಣಿಯೊಳಸ್ತಮಿಸೆ ವಸುಂ |
ಧರೆಯ ಸುತಂ ಫಣಿಯೊಳುದಯಿಸಲ್ ಬೞಿನಕ್ಕುಂ || ೪೯ ||

[1]ಹಿಮಕರಸುತ ಗುರು ಭೃಗುಜರ್ |
ಕ್ರಮದಿಂದೊಂದಾಗಿ ನಡೆಯೆ ಪೆರ್ಮೞೆಯಕ್ಕುಂ ||
[2]ಹಿಮರಶ್ಮಿ ಭೃಗುಗೆ ಜಾಮಿ |
ತ್ರಮೆನಲ್ ಚಂದ್ರನನೆ ಕಾಣೆ ಶುಭಮತಿಶುಭದಂ || ೫೦ ||

ಭೃಗುಗೆ ನವಪಂಚಮ(ಕ)ಂಗಳೊ |
ಳಗಲದೆ ರವಿ (ಶನಿ) ನೆಲಸೆ ಮಂದನಿಂ ಶುಭನಿವಹಂ ||
ಬಗೆಗೊಂಡು ನೋಡೆ ಮೞೆಗಳ್ |
ಬಗೆದಂತಿರೆ [3]ಕೞಿಗುಮಿಳೆಗೆ ಜಿನನಗರಪತೀ || ೫೧ ||

ಗುರು ಶೌರಿ ಪೊಗೆಯೆ(ಯೊಳಗೆ) ಪಸವು |
ಬ್ಬರವಕ್ಕುಂ ಮೂಱುವರುಷ ಮಿನನಂದನನಂ ||
ಗುರು ಗೆಲ್ದೊಡಕ್ಕುಮರ್ಘಂ |
ಗುರುವಂ ಶನಿ ಗೆಲ್ದೊಡಗ್ಗಳಂ ಬೞಿನಕ್ಕುಂ || ೫೨ ||

ಮಲ್ಲಿಕಾಮಾಲೆ|| ಶೌರಿ ಮಂತ್ರಿಗಳೊರ್ವರೊರ್ವರನೇಕಚಿತ್ತದೆ ತಮ್ಮ ಕ |
ಣ್ಣಾರೆ ನೋಡುವೊಡಂತೆ ರಾಜಕುಮಾರರುಂ ಸುಭಟರ್ಕಳುಂ ||
ತೀರೆ [4]ಗೊಳುವ ಮಗ್ಗುಗುಂ ಹಿಮಸೇತು ಮಧ್ಯದೆ ಸೃ(ವೃ)ಷ್ಟಿ ಸಂ |
ಹಾರದಂದಿನ ಘೋರದಂತತಿಘೋರ[5]ಮಕ್ಕುಮಿಳಾಗ್ರದೊಳ್ || ೫೩ ||

ಕಂ|| ಶುಕ್ರಂ ಬುಧನೊಡನಿರೆ |
ಶುಕ್ರಂ ಸ್ವಾತಿಯೊಳೆ ನೆಲಸಿ ನಿಂದೊಡೆ ಮತ್ತಂ ||
ವಿಕ್ರಮದೆ ಮಘೆಯ ನಡುವಣ |
ನುಕ್ರಮದಿಂ ಚಂದ್ರನುರ್ಚೆ [6]ಪೆರ್ಮೞೆಯಕ್ಕುಂ || ೫೪ ||

---

1 ಹಿಮಕರಗುರುಭೃಗುಜರ್ ವಿ । ಕ್ರಮ. 2 ಹಿಮಕರಭೃಗುಜಾಮಿತ್ರಮೆನಲ್. 3 ಕೞಿಕೞಿಯೆ ತುಂಬುಗುಂ ನಿಜಜಟ್ಟಾ । ಕೞಿಗುಮೆಂದ ಗೆಲ್ಲಿನಜಟ್ಟಂ ॥ 4 ಗೊಳುವರು, ತೆರೆಗೊಳುವರು. 5 ದುಃಖ ಮಿಳಾ. 6 ಪೆರ್ಮೆಯೊಳಕ್ಕುಂ.

*ಈ ಕಂದವು ಒಂದು ಪ್ರತಿಯಲ್ಲಿಲ್ಲ.

ಕಂ|| ಗುರು ಮಂದ ಶುಕ್ರರೊ(ನೊ)ಡನಿರೆ |
ಸುರನದಿ ಹೈ(ಹಿ)ಮಾದ್ರಿಯೆಡೆಯ ನಾಡೊಳಗೆಲ್ಲಂ ||
ಪಿರಿದು ಭಯಮಕ್ಕು ಮಲ್ಲಿಯ |
ನರರ್ಗಂ ಪುಲುಗು(ಪುಗುಲ್ಗ)ತ್ತಮಕ್ಕು ಮಿದು ಪರಮಾರ್ಥಂ || ೫೫ ||

ಕುಂದದೆ ಜ್ಯೇಷ್ಠಾಷಾಢದೊ |
ಳೆಂದುಂ ಶ್ರಾವಣದೊಳೆಸೆವ ವರುಣನ ದೆಸೆಯೊಳ್ ||
ನಿಂದ [1]ಕೊರಡಿಂದೆ ಮುಟಿಗಳ |
ನಿಂದಿತ ಮಾಸತ್ರಯಂ [ಬರಂ] ಬಱನಕ್ಕುಂ || ೫೬ ||

(ಇಂತು ಗ್ರಹನೆಲೆಯ ಫಲಂ)

ಅಬ್ದದೊಳ್ ಗ್ರಹಸಂಯೋಗ ಫಲಂ

ವ|| ಇನ್ನು ಅಬ್ದದೊಳ್ ಗ್ರಹಸಂಯೋಗ ಫಲಮಂ ಪೇಳ್ವೆಂ—

ಉ|| ನೆಟ್ಟನೆ ಹೇಮಳಂಬಿಯೆನಿಪಬ್ದದೊಳರ್ಕನ ಸೂನು ಕುಂಭದೊಳ್ |
[2]ಜಿಟ್ಟಗನಪ್ಪದೇವಗುರು ಸಿಂಹದೊಳಲ್ಲಿರೆ ಲಂಕೆಯಿಂದಮೆ ||
ಟ್ಟಟ್ಟಿ ತಗುಳ್ದು ಪೆರ್ಬಸವಿನೊಳ್ ಪ್ರಜೆ ಮೂಱಱೊಳೊಂದು ಭಾಗೆ ಯು |
ಬ್ಬಟ್ಟೆಯೊಳಿಂಬಿನಂ ಬರ್ದುಗುಗುಂ ಸಲೆ ನಾಗಕುಮಾರನೋಜೆಯಿಂ || ೫೭ ||

ಚಂ|| ವರಪರಿಧಾವಿಯೆಂಬ ಪೆಸರಬ್ದದೊಳರ್ಕನ ಸೂನು ಸಿಂಹದೊಳ್ |
ಸುರಗುರು ವೃಶ್ಚಿಕಾಲಯದೊಳೊಂದಿರೆ ನಚ್ಚಿನ ಕೃಷ್ಣವೇಣಿಯಿಂ ||
ನಿರುಪಮನರ್ಮದಾತಟಮನೆಯ್ದುವಿನಂ ಪಸವಿಲ್ದು ಮಾರಿ ತ |
ಸ್ಕರಭಯಮೆಂಬ ಬಾಧೆಯೊಳೆ ಮೂಱಱೊಳಗೊಂದು(ದ)ಳಿಗುಂ ಜಗಜ್ಜನಂ || ೫೮ ||

ಮ|| ವಿಳಸತ್ಕ್ರೋಧಿನಿಯೆಂಬ ವತ್ಸರದೊಳಂತರ್ಕಾತ್ಮಜಂ ಮೀನದೊಳ್ |
ಬಳವಿದ್ವಿಷ್ಟನ ಮಂತ್ರಿ ಕನ್ನೆಯೊಳಿರಲ್ ಶ್ರೀನರ್ಮದಾತೀರದಿಂ ||
ದಿಳೆಯೊಳ್ ಮಿಕ್ಕ(ಕ್ಕು) ಹಿಮಾದ್ರಿಯೆಯ್ದುವಿನೆಗಂ ದುರ್ಭಿಕ್ಷಮುಂ ವ್ಯಾಧಿಯುಂ |
ಕಳವುಂ ಡಾಮರಮುಂ ತ್ರಿಭಾಗದೊಳಗೊಂದಪ್ಪನ್ನೆಗಂ ಕುಂದುಗುಂ || ೫೯ ||

ಕಂ|| ಗುರು ಕನ್ನೆಯೊಳಿರೆ ಮೀನದೊ |
ಳಿರೆ ಶನಿ ನರ್ಮದೆಯಿನತ್ತ ಹಿಮಗಿರಿವರೆಗಂ ||
ಧರಣಿತಳಂ ಪಾಟಕ್ಕುಂ |
ವರುಷಪ್ರಭವಾದಿ ಯಾವುದಾದೊಡಮಕ್ಕುಂ || ೬೦ ||

(ಇಂತು ಅಬ್ದದೊಳ್ ಗ್ರಹಸಂಯೋಗ ಫಲಂ)

---

1 ಪುರದಿಂದ, ಕೊದೆದುಂಡಾ ಮರಗಡ ನಿಂದಿತಾಮುಸತ್ರಯ. 2 ಜ್ಯೇಷ್ಠಗ.

## ೭. ಗ್ರಹಯುದ್ಧ ಫಲಂ

ವ|| ಇನ್ನು ಗ್ರಹಯುದ್ಧ ಫಲಮಂ ಪೇೞ್ವೆಂ—

ಮ|| ಶನಿಯಂ ಭೂಮಿಜನೊತ್ತಿ ಸಾಡೆ ಬೆಳೆಗುಂ ಮಂದಾರನಂ ಚಂದ್ರನಂ |
ದನನೊತ್ತಲ್ ಪವಮಾನ ವೃಷ್ಟಿ(ದ್ಧಿ) ಶನಿಯುಂ ಭೂಜಾತನಂ ಸೌಮ್ಯನಂ ||
ದನುಜೇಜ್ಯಂ ಗೆಲೆ ಲೇಸು ನೀಲಕುಜ [1]ತತ್ಸೌಮ್ಯೇಶನಾನೀಕಮಂ |
ವಿನುತಂ ಮಂತ್ರಿಯೆ ಗೆಲ್ದೊಡೊಳ್ಳಿತಿವರಂ ಚಂದ್ರಂ ಗೆಲ(ನ)ಲ್ ಶೋಭನಂ || ೬೧ ||

ಚಂ|| ಸಿತನನೆ ದೇವಮಂತ್ರಿ ಗೆಲೆ ಪೆರ್ಮೞೆಯಾಗದಮೋಘಮೆಲ್ಲಿಯುಂ |
ಸಿತನನೆ ಚಂದ್ರಜಂ ಗೆಲೆ ಕೆಲರ್ ಮೞೆಗಾಲಮನೊಯ್ಯರೆ(ನೆ)ಂಬ ರಾ ||
ಕ್ಷಿತಿತನಯಂ ಸುರೇಂದ್ರಗುರು ಭಾರ್ಗವನ(ರ)ಂ ಗೆಲೆ ಡಾಮರಂಗಳುಂ |
ಕ್ಷಿತಿಗೆ ಬಱಂಗಳುಂ ಪ್ರಜೆಗೆ ಬಾಧೆಗಳುಂ [2]ಮಿಗಿಲಕ್ಕು ಮೆಲ್ಲಿಯುಂ || ೬೨ ||

ಕಂ|| ಮಂದಂ ಗುರುಸಿ(ಸು)ತರಂ ಗೆಲೆ |
ಕುಂದವು ಕಲಹಂ ಘನಾಳಿ ಕಱೆಯದೆ ಬಱಗುಂ ||
ಪೊಂದುವರನೇಕರುಂ ರುಜೆ |
ಯಿಂದಂ ಧನಧಾನ್ಯವೃದ್ಧಿ ಯಿಲ್ಲೆಲ್ಲೆಡೆಯೊಳ್ || ೬೩ ||

ಗುರುವಂ ಚಂದ್ರಸುತಂ ಗೆಲೆ |
ಪಿರಿದುಂ ಮೞೆಯುಕ್ಕುಮವನಿಯೆನಿತನಿತೆಡೆಯೊಳ್(ಗಂ) ||
ಕರುಣರಸಮೊದವೆ ಬಾಲಕ |
ರಿರದೞಿಗುಂ ವ್ಯಾಧಿಯಿಂದಮಿದು ಪರಮಾರ್ಥಂ || ೬೪ ||

ಗುರುವಂ ಭೃಗು ಗೆಲೆ ನೃಪರಿಂ |
ಕಿರಾತಪಡೆ ಕಿಡುಗು ಮಿಂಡುವಂ ಶನಿ ಗೆಲೆ ಯು ||
ರ್ವರೆಗೆ ಮೞೆಯಾಗದಿರ್ಕುಂ |
ನಿರಂತರಂ ಬಱನು [3]ಮಿೞ್ದಿಯುಂ ಪಿರಿದಕ್ಕುಂ || ೬೫ ||

ಕನಕಂ ಶನಿಯುಂ ಗೆಲ್ವೊಡೆ |
ಜನಾಧಿಪಾತ್ಮಜರ್ಗೆ ಪಿರಿದು ಸಂತಸಮಕ್ಕುಂ ||
ದನುಜಗುರು ಚಂದ್ರನಂ ಗೆಲೆ |
ಅನು(ಪಮ)ನಿಭ ಮೞೆಯುಕ್ಕು ಮತ್ತೆ ರುಜೆಗಳುಮಕ್ಕುಂ || ೬೬ ||

ಶೀತಕರಂ ಬುಧನಂ ಗೆಲೆ |
ಭೂತಳಮೆನಿತನಿತು ಮೊಳ್ಪಿತಾಗಿಯೆ(ರೆ) ಬೆಳೆಗುಂ ||
ಮಾತೇಂ ಶಿಶುಗಳ್ಗೆ ರುಜಾ |
ವ್ರಾತಂ ಕೆಯ್ಕೊಂಡುಮೊಳ್ಪಿತಕ್ಕುಂ ತುದಿಯೊಳ್ || ೬೭ ||

1 ಸ್ವಾಪುಮೇಷನಾಗಿತಮಂ । ವಿನುತ ಮಂತ್ರಿ. 2 ಪಿರಿದಕ್ಕು. 3 ಮೃತ್ಯುವುಂ ಪೆರ್ಚಿಸುಗುಂ.

ಕಂ|| ಗುರು ಮಂದ ಶುಕ್ರರೊ(ನೊ)ಡನಿರೆ |
ಸುರನದಿ ಹೈ(ಹಿ)ಮಾದ್ರಿಯೆಡೆಯ ನಾಡೊಳಗೆಲ್ಲಂ ||
ಪಿರಿದು ಭಯಮಕ್ಕು ಮಲ್ಲಿಯೆ |
ನರರ್ಗಂ ಪುಟುಗು(ಪುಗುಱ್ಗ)ತ್ತಮಕ್ಕು ಮಿದು ಪರಮಾರ್ಥಂ || ೫೫ ||

ಕುಂದದೆ ಜ್ಯೇಷ್ಠಾಷಾಢದೊ |
ಳೆಂದುಂ ಶ್ರಾವಣದೊಳೆಸೆವ ವರುಣನ ದೆಸೆಯೊಳ್ ||
ನಿಂದ [1]ಕೊರಡಿಂದೆ ಮುಱಿಗಳ |
ನಿಂದಿತ ಮಾಸತ್ರಯಂ [ಬರಂ] ಬಱನಕ್ಕುಂ || ೫೬ ||

(ಇಂತು ಗ್ರಹನೆಲೆಯ ಫಲಂ)

ಅಬ್ದದೊಳ್ ಗ್ರಹಸಂಯೋಗ ಫಲಂ

ವ|| ಇನ್ನು ಅಬ್ದದೊಳ್ ಗ್ರಹಸಂಯೋಗ ಫಲಮಂ ಪೇೞ್ವೆಂ—

ಉ|| ನೆಟ್ಟನೆ ಹೇಮಳಂಬಿಯೆನಿಪಬ್ದದೊಳರ್ಕನ ಸೂನು ಕುಂಭದೊಳ್ |
[2]ಜಿಟ್ಟಗನಪ್ಪದೇವಗುರು ಸಿಂಹದೊಳಲ್ಲಿರೆ ಲಂಕೆಯಿಂದಮೆ ||
ಬ್ಬಿಟ್ಟ ತಗುಳ್ದು ಪೆರ್ಬಸವಿನೊಳ್ ಪ್ರಜೆ ಮೂಱಱೊಳೊಂದು ಭಾಗೆ ಯು |
ಬ್ಬಟ್ಟೆಯೊಳೆಂಬಿನಂ ಬರ್ದುಗುಗುಂ ಸಲೆ ನಾಗಕುಮಾರನೋಜೆಯಿಂ || ೫೭ ||

ಚಂ|| ವರಪರಿಧಾವಿಯೆಂಬ ಪೆಸರಬ್ದದೊಳರ್ಕನ ಸೂನು ಸಿಂಹದೊಳ್ |
ಸುರಗುರು ವೃಶ್ಚಿಕಾಲಯದೊಳೊಂದಿರೆ ನಚ್ಚಿನ ಕೃಷ್ಣವೇಣಿಯಿಂ ||
ನಿರುಪಮನರ್ಮದಾತಟಮನೆಯ್ದುವಿನಂ ಪಸವಿಲ್ದು ಮಾರಿ ತ |
ಸ್ಕರಭಯಮೆಂಬ ಬಾಧೆಯೊಳೆ ಮೂಱಱೊಳಗೊಂದು(ದ)ಳಿಗುಂ ಜಗಜ್ಜನಂ
|| ೫೮ ||

ಮ|| ವಿಳಸತ್ಕ್ರೋಧಿನಿಯೆಂಬ ವತ್ಸರದೊಳಂತರ್ಕಾತ್ಮಜಂ ಮೀನದೊಳ್ |
ಬಳವಿದ್ವಿಷ್ಟನ ಮಂತ್ರಿ ಕನ್ನೆಯೊಳಿರಲ್ ಶ್ರೀನರ್ಮದಾತೀರದಿಂ ||
ದಿಳೆಯೊಳ್ ಮಿಕ್ಕ(ಕ್ಕು) ಹಿಮಾದ್ರಿಯೆಯ್ದುವಿನೆಗಂ ದುರ್ಭಿಕ್ಷಮುಂ ವ್ಯಾಧಿಯುಂ |
ಕಳವುಂ ಡಾಮರಮುಂ ತ್ರಿಭಾಗದೊಳಗೊಂದಪ್ಪನ್ನೆಗಂ ಕುಂದುಗುಂ || ೫೯ ||

ಕಂ|| ಗುರು ಕನ್ನೆಯೊಳಿರೆ ಮೀನದೊ |
ಳಿರೆ ಶನಿ ನರ್ಮದೆಯಿನತ್ತ ಹಿಮಗಿರಿವರೆಗಂ ||
ಧರಣಿತಳಂ ಪಾೞಕ್ಕುಂ |
ವರುಷಪ್ರಭವಾದಿ ಯಾವುದಾದೊಡಮಕ್ಕುಂ || ೬೦ ||

(ಇಂತು ಅಬ್ದದೊಳ್ ಗ್ರಹಸಂಯೋಗ ಫಲಂ)

---

1 ಕೊರದಿಂದ, ಕೊದಡುಂಡಾ ಮರಗಳ ನಿಂದಿತಾಮಸತ್ರಯ. 2 ಜ್ಯೇಷ್ಠಗ.

೬. ಗ್ರಹಯುದ್ಧ ಫಲಂ

ವ|| ಇನ್ನು ಗ್ರಹಯುದ್ಧ ಫಲಮಂ ಪೇಟ್ವೆಂ—

ಮ|| ಶನಿಯಂ ಭೂಮಿಜನೊತ್ತೆ ಸಾಡೆ ಬೆಳೆಗುಂ ಮಂದಾರನಂ ಚಂದ್ರನಂ |
ದನನೊತ್ತಲ್ ಪವಮಾನ ವೃಷ್ಟಿ(ದ್ಧಿ) ಶನಿಯುಂ ಭೂಜಾತನಂ ಸೌಮ್ಯನಂ ||
ದನುಜೇಜ್ಯಂ ಗೆಲೆ ಲೇಸು ನೀಲಕುಜ [1]ತತ್ಸ್ವಾಮ್ಯೇಶನಾನೀಕಮಂ |
ವಿನುತಂ ಮಂತ್ರಿಯೆ ಗೆಲ್ದೊಡೊಳ್ಪಿತಿವರಂ ಚಂದ್ರಂ ಗೆಲ(ನ)ಲ್ ಶೋಭನಂ || ೬೧ ||

ಚಂ|| ಸಿತನನೆ ದೇವಮಂತ್ರಿ ಗೆಲೆ ಪೆರ್ಮೞೆಯಾಗದಮೋಘಮೆಲ್ಲಿಯುಂ |
ಸಿತನನೆ ಚಂದ್ರಜಂ ಗೆಲೆ ಕೆಲರ್ ಮೞೆಗಾಲಮನೊಯ್ಯರೆ(ನೆ)ಂಬ ರಾ ||
ಕ್ಷಿತಿತನಯಂ ಸುರೇಂದ್ರಗುರು ಭಾರ್ಗವನ(ರ)ಂ ಗೆಲೆ ಡಾಮರಂಗಳುಂ |
ಕ್ಷಿತಿಗೆ ಬೞಂಗಳುಂ ಪ್ರಜೆಗೆ ಬಾಧೆಗಳುಂ [2]ಮಿಗಿಲಕ್ಕು ಮೆಲ್ಲಿಯುಂ || ೬೨ ||

ಕಂ|| ಮಂದಂ ಗುರುಸಿ(ಸು)ತರಂ ಗೆಲೆ |
ಕುಂದವು ಕಲಹಂ ಘನಾಳಿ ಕೞೆಯದೆ ಬೞಗುಂ ||
ಪೊಂದುವರನೇಕರುಂ ರುಜೆ |
ಯಿಂದಂ ಧನಧಾನ್ಯವೃದ್ಧಿಯಿಲ್ಲೆಲ್ಲೆಡೆಯೊಳ್ || ೬೩ ||

ಗುರುವಂ ಚಂದ್ರಸುತಂ ಗೆಲೆ |
ಪಿರಿದುಂ ಮೞೆಯುಕ್ಕುಮವನಿಯೆನಿತನಿತೆಡೆಯೊಳ್(ಗಂ) ||
ಕರುಣರಸಮೊದವೆ ಬಾಲಕ |
ರಿರದೞಗುಂ ವ್ಯಾಧಿಯಿಂದಮಿದು ಪರಮಾರ್ಥಂ || ೬೪ ||

ಗುರುವಂ ಭೃಗು ಗೆಲೆ ನೃಪರಿಂ |
ಕಿರಾತಪಡೆ ಕಿಡುಗು ಮಿಂದುವಂ ಶನಿ ಗೆಲೆ ಯು ||
ರ್ವರೆಗೆ ಮೞೆಯಾಗದಿರ್ಕುಂ |
ನಿರಂತರಂ ಬೞನು [3]ಮಿಟ್ಟಿಯುಂ ಪಿರಿದಕ್ಕುಂ || ೬೫ ||

ಕನಕಂ ಶನಿಯಂ ಗೆಲ್ವೊಡೆ |
ಜನಾಧಿಪಾತ್ಮಜರ್ಗೆ ಪಿರಿದು ಸಂತಸಮಕ್ಕುಂ ||
ದನುಜಗುರು ಚಂದ್ರನಂ ಗೆಲೆ |
ಅನು(ಪಮ)ನಿಭ ಮೞೆಯುಕ್ಕು ಮತ್ತೆ ರುಜೆಗಳುಮಕ್ಕುಂ || ೬೬ ||

ಶೀತಕರಂ ಬುಧನಂ ಗೆಲೆ |
ಭೂತಳಮೆನಿತನಿತು ಮೊಳ್ಪಿತಾಗಿಯೆ(ರೆ) ಬೆಳೆಗುಂ ||
ಮಾತೇಂ ಶಿಶುಗಳ್ಗೆ ರುಜಾ |
ವ್ರಾತಂ ಕೆಯ್ಕೊಂಡುಮೊಳ್ಪಿತಕ್ಕುಂ ತುದಿಯೊಳ್ || ೬೭ ||

1 ಸ್ವಾಮ್ಯಮೇಶನಾಗಿತಮುಂ । ವಿನುತ ಮಂತ್ರಿ. 2 ಪಿರಿದಕ್ಕು. 3 ಮೃತ್ಯುವುಂ ಪೆರ್ಚಿಸುಗುಂ.

ಕಂ|| ಎಸೆವನುರಾಧೆಯ ತೆಂಕಣ |
ದೆಸೆಯೊಳ್ ಗ್ರಹಸಮಿತಿ ನಡೆಯೆ ನೀರ್ವರಿಯೆ ಘನ ||
ಪ್ರಸರಂ ಕಱೆಯದೆ ಬಱುಗುಂ |
ವಸುಮತಿಯೊಳ್ ವಿಡ್ವರಂಗಳಕ್ಕುಮಮೋಘಂ || ೧೮ ||

ಸ್ವಾತಿತ್ರಯದೊಳ್ ಗುರು(ವುಂ)ವಿ |
ಖ್ಯಾತಿಯ (ತ್ರಿ)ಪಂಚಕದೊಳ್(ಳೆ) ಸುರಗುರುವಿರೆ ದಿನಕೃ ||
ಜ್ಜಾತನವನಂ ಗೆಲ್ವೊಡೆ ಧಾ |
ತ್ರೀ ತಳದಿಂ[1]ದರ್ಘ ಮುಱಿಯಲುಱಿ(ದವು)ವುದು ಬೆಳೆಗುಂ || ೧೯ ||

*ಉದಯಾಸ್ತದೊಳಂ ಭೃಗುವಾ |
ವುದನಪ್ಪೊಡಮಕ್ಕೆ ಗೆಲ್ವೊಡೊಳ್ಳಿತು ಸೋಲ್ತಂ ||
ದದೆ ಕರಮೆ ಪೊಲ್ಲದರ್ಘಂ |
ಮೊದಲೊಳ್ ಮಱೆಕೊಳ್ಳದೆಂದನೊಳ್ಪಿನ ಅಟ್ಟಾ || ೨೦ ||

ತ್ರಿಕದೊಳ್ ದಾನವಗುರು ಪಂ |
ಚಕದೊಳ್ ದಿವಿಜೇಂದ್ರಮಂತ್ರಿ ನಿಂದಾಗಳವಂ ||
ಪ್ರಕಟಂ ಶನಿ ಗೆಲ್ವೊಡೆ ಪ |
ಟ್ಟಕೆ ಸಲೆ ಪಡೆವರ್ಗೆ ಮಜರಜನವ(ಗ)ಮನುಚಿತಂ || ೨೧ ||

ಸ್ವಾತಿ ಮಘೆ ಮೂಱುತ್ತರೆ |
ಭೂಕೇತು ಜ್ಯೇಷ್ಠೆ ಕಮಲಜಾರ್ಕ್ಷದೊಳಾದ(ತ)ಂ ||
ಮಾತೇಂ ನಡೆಯೆ ಬಱಿಂ ಭೃಗು |
ಜಾತಂ ಕನಕನನೆ ಗೆಲ್ದೊಡಕ್ಕುಂ ಮಱೆಗಳ್ || ೨೨ ||

ಅಮಾವಾಸೆಯೊಳಿನನಂ ಪು |
ಣ್ಣಿಮೆಯೊಳ್ ಹಿಮಕರನನೇಕಪಕ್ಷದೊಳಹಿ ವಿ ||
ಕ್ರಮದಿಂ ಕೊಳೆ ರುಧಿರದ ಕ |
ರ್ದಮಮಕ್ಕುಂ ಧಾತ್ರಿ ಪಟ್ಟಬದ್ಧರ್ ಮಡಿಗುಂ || ೨೩ ||

ಸ್ವಾಗತಂ|| ಸ್ವಾತಿ ಚಿತ್ತೆ ಭುಜಗಾಂಗಿರಸಾಮ್ಯ |
ವ್ರಾತದೊಳ್ ಗ್ರಹಮುಮಸ್ತಮಿಸುತ್ತು ||
ದ್ಯೋತಮಾಗೆ ಧರಣೀತಳಕೆಲ್ಲಂ |
ಭೀತಿ ನೆಟ್ಟನೆ ನಿವಾರಿತಮಕ್ಕುಂ || ೨೪ ||

ಕಂ|| ಪುಂದನತಿ ಶೀಘ್ರದೆಸೆಗೆ ಪು |
ರಂದರಗುರು ವಕ್ರದೆಸೆಗೆ ತೆಂಕಣದೆಸೆಯೊ(ನೆಲದೊ)ಳ್ ||
ಕುಂದದು ಪಸವುಂ ಕಲಹಂ |
ದಂದುಗಮುಂ ಪುಗುಗುಮಲ್ಪ(ಮ)ಸ್ವಲ್ಪಂ ಬೆಳೆಗುಂ || ೨೫ ||

(ಇಂತು ಗ್ರಹಯುದ್ಧ ಫಲಂ)

---

1 ತಳರ್ದ. *ಒಂದು ಪ್ರತಿಯಲ್ಲಿ ಈ ಸ್ಥಳದಲ್ಲಿ 41 ನೆಯ ತಾಳಾಪತ್ರವಿಲ್ಲ—ಎಂದು ಪುತ್ರಿಕೆಯಲ್ಲಿ ಬರೆದಿದೆ.

## ೮. ಗ್ರಹೋದಯ ಫಲಂ

ವ|| ಇನ್ನು ಗ್ರಹೋದಯಂಗಳಂ ಪೇಳ್ವೆಂ—

(ಮಂಗಳನುದಯಂ)

ಚಂ|| ಅರುಣತೆವೆತ್ತು ಕಿಂಶುಕದ ಪೂವಿನ ಬಣ್ಣಮೆ ಬಣ್ಣಮಾಗೆಯುಂ |
ಕರಗುವ ಸುಲ್ವಿನಾಕೃತಿಯೊಳಂಗಿರಿ ಯುಜ್ಜ್ವಳಲಕ್ಷನಾಗೆಯುಂ ||
ನಿರತಿಶಯಾಂಗನಾಗಿಯುಮಿಳಾತ್ಮಜನುದ್ಯತನಾದೊಡುತ್ತರೋ |
ತ್ತರಮಭಿವೃದ್ಧಿಯಕ್ಕು ಮವನೀತಳಕೆಲ್ಲಿಯು ಮೊಂದೆ ಮಾಳ್ಕೆಯಿಂ || ೭೬ ||

(ಬುಧನುದಯಂ)

ಮ|| ಎಸೆವಾಶ್ವೀಜದೊಳಕ್ಕೆ ಕಾರ್ತಿಕದೊಳಂ ಚಂದ್ರಾತ್ಮಜಂ ಮೂಡೆ ಪೆ |
ರ್ಚಸಮುಂ ಡಾಮರಮುಂ ಮಹಾಮರುಷಮುಂ ರೋಗಂಗಳುಂ ಯುದ್ಧಮುಂ ||
ಬಿಸಿಲುಂ ಕಿರ್ಚಿನ(ನೊ)ಳುರ್ಕೆಯುಂ ಮಱುಕಮುಂ ಕೇಳ್ ದಕ್ಷಿಣಾಶಾಂತದೊಳ್ |
[1](ಪಸಮುಂ) ಪೆರ್ಚುಗುಮೆಂದು ಗಾರ್ಗ್ಯಮುನಿಪಂ ಪೇಳ್ದಂ ಮಹೀಭಾಗದೊಳ್ || ೭೭ ||

ಮ|| ವರವೈಶಾಖದ ಮಾಘಪುಷ್ಯವೆರಸಂತಾಷಾಢದೊಳ್ ಶ್ರಾವಣಾಂ |
ತರದೊಳ್ ಚಂದ್ರಸುತೋದಯಂ ಜಯಕರಂ ಸಯ್ಯ(ದ್ಯೋ)ಸ್ತನಾದಂದು ಗ ||
ಹ್ವರಿಯೊಳ್ ಸಂತಸಮಕ್ಕುಮಾ ವುದಯದೊಳ್ ಗೋಮಾರಿರೋಗೋತ್ಕಟಂ |
*ಪರಮಾರ್ಥಂಗಳಿವೆಂದು ಪೇಳ್ದನಭಯಂ ಸಮ್ಯಕ್ತ್ವ ರತ್ನಾಕ(ರಂ)ರಾ || ೭೮ ||

ಚಂ|| ಕನಕದ ಬಣ್ಣದಿಂ ಶುಕನ ವರ್ಣದೆ ಮೇಣೆಸೆದಿರ್ಕೆ ಸಸ್ಯಮ |
ಕ್ಕನಿಸೆಣೆಯಾಗೆ ಮಾಣಿಕದ ಬಣ್ಣಮೆ ತಾನೆನಿಸಿರ್ಕೆ [2]ದೀಪ್ತಿ(ಯಿ)ಯಂ ||
ತನು ಕರಿದಾಗೆ ಸಂದ ಶಶಿಜಾತನ ರೂಪು[3]ಮದಿಂತುಟಾಗೆ ಮೇ |
ದಿನಿಗೆ ಶುಭೋತ್ಕರಂ ವಿಕೃತದಿಂದಶುಭೋತ್ಕರಮಕ್ಕು ಬಟ್ಟೆ(ಗಾ)ನಿಂ || ೭೯ ||

(ಗುರುವಿನುದಯಂ)

ಚಂ|| ಮಿಸುಗುವ ದೀಪ್ತಿಯಿಂ ಬಿಳಿಯ ತಾವರೆಯಂ ಸ್ಫಟಿಕಪ್ರಭಾಳಿಯಂ |
ಪೊಸತಲರ್ದಿರ್ದ ಮೊಲ್ಲೆಯರಲಂ ಮಿಗೆ ಪೋಲ್ತು ಬೃಹತ್ಯ(ತ್ಸ)ರಾಗದಿಂ ||
ದೆಸೆದುದಯಿಪ್ಪನಾಗೆ ಗುರು ಸಾರೆ ಗುಣಂಗಳನೀಗುಮೆಂದು ಭಾ |
ವಿಸುವುದಿಳಾಜನಂ ನೆಗಟ್ದ ಗಾರ್ಗ್ಯಮುನೀಶ್ವರರಾಗಮೋಕ್ತಿಯಿಂ || ೮೦ ||

(ಶುಕ್ರನುದಯಂ)

ಕಂ|| ಸ್ವಾತಿತ್ರಿಕ ಜ್ಯೇಷ್ಠಾದಿಯೊ |
ಳೀತೊಂದಳಾಷಾಂಗಿಂ ಭೃಗುಜನುದಯಿಸೆ ಶುಭದಂ ||
ಮಾತೇಂ ನಾಲ್ಕುಯ್ಯಾದಿ ಬಱಿಕೊ |
ಳಾ(ತ)ತಿಥಿವೀಥಿಯೊಳೆ ಮೂಡಲುದಯಿಸೆ ಶುಭದಂ || ೮೧ ||

---

1 ಕ್ಷಮನಿಂ ಪೆರ್ಚು, ಯಿನಿತುಂ ಪುಟ್ಟುಗು. 2 ದೃಷ್ಟಿಯಿಂ. 3 ಮನಿಂತುದಗ್ರ.

*ಒಂದು ಪ್ರತಿಯಲ್ಲಿ ಈ ಪಾದವು ಹೆಚ್ಚಾಗಿದೆ—
" ನಿರುತಂ ಡಾಮರಮಕ್ಕು ಮರ್ಘಮಿಱುಗುಂ ಶ್ರೀಶ್ರಾವಣಾಷಾಢದೊಳ್ "

ಕಂ|| ಉದಯಿಸಿದ ದಿವಸ(ದೊಳೆ)ದಿಂ ತೊ |
ಟ್ಟು ದನುಜಗುರು ಮೂಡಲಿರ್ಪ್ಪ ತರ್ಕ್ಷದೆ ಪಡೆಗುಂ ||
ತೊದಳೇಂ ಪತ್ತೊಂಬತ್ತು |
ರ್ಕ್ಷದೆ ಪಡುವಲ್ ಮೂಡೆ ಪಡುಗೆಯುಂ ತಾಂ ಭೃಗುಜಂ || ೮೨ ||

ಶಾಳಾಷ್ಟಮಿ ಪಂಚಮಿಯೊಳ್ |
ಕಾಳಚತುರ್ದಶಿಯೊಳಸುರಗುರುವುದಯಿಸೆ ಭೂ ||
ಪಾಳರ್ ಪಾಳಿಪರಿಳೆಯಂ |
ಜೋಳಂ ಮೊದಲಾಗೆ ಸಕಳಧಾನ್ಯಂ ಬೆಳೆಗುಂ || ೮೩ ||

ಚಂ|| ಅನಲನ ಬಣ್ಣದಿಂ ದಹನಮಂ ಕಡುಗೆಂಪಿನೆ ಶಸ್ತ್ರಘಾತಮಂ |
ಕನಕನಿಭಾಂಗ(ದಿಂದೆ)ನಾಗೆ ರುಜೆಯುಂ ಪಸುರ್ಪಿಂ ಖಳಬಾಧೆ ಭಸ್ಮಮಂ ||
ತನುರುಚಿ ಪೋಲೆ ಪೆರ್ಬಿಜದ ಭೀತಿ ಕರಂ ಪಿರಿದಕ್ಕುಮೆಂದು ಪೇೞ್ |
ದನುಜರ ಮಂತ್ರಿಯಂಗರುಚಿ ನಿರ್ಮಳಮಾಗೆ ಸುಭಿಕ್ಷಮೆಲ್ಲಿಯುಂ || ೮೪ ||

ಚಂ|| ತನು ಪಿರಿದಾಗಿ ದೀಪ್ತಿ ಕರಮುಜ್ಜ್ವಳಮಾಗೆ ಶಶಾಂಕನಂದದಿಂ |
ದನುಪಮಕಾಂತಿಯಾಗೆ ಜಯಪುಷ್ಕರವಾರಿ[ಧಿ] ವೀಥಿಯೊಳ್ ಕರಂ ||
ಸು(ಸ)ನಯದಿನುರ್ಚಿ ಮಿತ್ರನಿಳಯಸ್ಥಿತನಾಗೆ ನಿಶಾ(ಟ)ಚರ ಮಂತ್ರಿಯಿಂ |
ವಿನುತಮಹೀತಳಂ ಕೃತಯುಗಾಂತರದಂತೆ ಸುಭಿಕ್ಷಮೆಲ್ಲಿಯುಂ || ೮೫ ||

(ಶನಿಯುದಯಂ)

ಕಂ|| ವರವೈಡೂರ್ಯದ ಬಣ್ಣದೆ |
ಕರವೊಪ್ಪುವ ಕಾಂತಿವೆತ್ತುಮಗಸೆಯ ಪೂವಂ ||
ದೊರೆಗಿಡಿಪ ಬಣ್ಣದಿಂ ಭಾ |
ಸ್ಕರತನಯಂ ಭುವನಕೆಲ್ಲಮೊಳ್ಪಂ ಮಾೞ್ಪಂ || ೮೬ ||

ಮ|| ವರರತ್ನಚ್ಛವಿಯಿಂದೆ ಶಸ್ತ್ರಭಯಮಂ ಭಸ್ಮಾಂಗದಿಂ ಮಾೞ್ಕೆ(ೞ್ಕು) ಡಾ |
ಮರಮಂ ಪೀತ ಮಯೂಖದಿಂದೆ ಪಸವಂ ಸಂಕೀರ್ಣಸಂಕಾಶದಿಂ ||
ದೊರೆ(ತಾ)ಕಾಶಾಂಡದ ಸಂಕುಳಕ್ಕೆ ಪಿರಿದುಂ ಸಂತಾಪಮಂ ಭಾನುಜಂ |
ನಿರುತಂ ಮಾಡುಗುಮೆಂದು ಜಟ್ಟಗನಿದಂ ಪೇೞ್ದಂ ಮಹೀಭಾಗದೊಳ್ || ೮೭ ||

(ಇಂತು ಗ್ರಹಂಗಳುದ(ಯಾಸ್ತ)ಯ ಫಲಂ ಸಮಾಪ್ತಂ)

೯. ಗ್ರಹಂಗಳ ಸ್ವರೂಪ ಫಲಂ

ವ|| ಇನ್ನು ಗ್ರಹಂಗಳ ಫಲಮಂ ಪೇೞ್ವೆಂ—

ಕಂ|| ಉದಯಾಸ್ತಮಾನದೊಳ್ ತೇ |
ಜದ[1]ಪುದ(ಟು)ವಿನೋಽಜ್ಜ[2]ಲಾರ್ಚಿಯಿಂ ಸ್ನಿಗ್ಧತೆಯಿಂ ||
ದೊದವಿದ ರೂಪಿಂ ಗ್ರಹಮೊ |
ಪ್ಪಿದುದಂ ಕಂಡಾಗಳಱಿದು ಪೇೞ್ವುದು ಫಲಮಂ || ೮೮ ||

---

1 ಪುಟುವಿನವೊಲು ವಿಧುವಿನುಜ್ಜ್ವಳಕೀರ್ತಿಯಿಂ. 2 ಲೋಕ್ತ.

ಕಂ|| ಸೋಲ್ತುದು ಗೆಲ್ದುದು ಮಗುೞ್ದುಂ |
ಸೋಲ್ತುದು ಭಿಂದಿಸಿದುದಸ್ತಮಿಸಿದುದು ಮಗುೞ್ದುಂ ||
ನಿಲ್ತುದು ಮಗುೞ್ದುದಯಿಸಿ ಕಾ |
ದಲ್ತೊಡಗಿದುದೀ ಗ್ರಹಂಗಳಿಂದಱಿ ಮುನ್ನಂ || ೮೯ ||

ಮ|| ಉದಯಂ ಸೌಮ್ಯನಿವಾಸವಾತ್ಮನಿಳಯಂ ನೈಸರ್ಗಿಕಂ ಮಿತ್ರಸಂ |
ಪದ ಮತ್ಯುಚ್ಚಮುದಗ್ರರೂಪಮಮಳಂ ತತ್ಕಾಲವೇಳಾಬಲಂ ||
ಪದಪಿಂ ನೋಡುವ ನೋಟ ಮಾತ್ಮವಿಜಯಂ ದಿಗ್ದೇಶಭೂಮಾಸ್ಪದಂ |
ಮೊದಲಾಗೊಳ್ಪಿ[1]ದುವೆಲ್ಲಮಂ ಗ್ರಹದೆ ಕೊಳ್ ಪೊಲ್ಲೆಂಬುದಂ ಕೊಳ್ಳದಿರ್|| ೯೦ ||

ಕಂ|| ಇಂತೀ ಗ್ರಹಬಲದಳವಂ |
ಚಿಂತಿಸಿ ಮತ್ತಂ ವಿಶೇಷಮೆನಿಸುವ ನಯಮಂ ||
ಭ್ರಾಂತಿಸದೊಡಗೂಡಿರ್ದ(ರ್ದು) ಜ |
ಗಂ ತನ್ನಂ [2]ಪೊಗೞೆ ನೆಗೞೆ ಪೇೞ್ವುದು ನಯಮಂ || ೯೧ ||

ಚಂ|| ಅರಸರ ಬಾಧೆಯಂ ರಸವಿಹೀನತೆಯಂ ಫಲಮಂ ನಯಂಗಳಂ |
ಸ್ಫುರಯಿಪ ಮಾರಿಯಂ ಚರಿಯಿಪರ್ಘದ ಕುಂದನಮೋಘಮಾಗಿಕುಂ ||
ಹರಿಣಧರಂ ಕುಜೇಂದುಜ ಸುರೇಜ್ಯಸಿತಂ ಶನಿಗಂಜಿದಂದು ನೀಂ |
ಪರಿಕಿಸಿ [3]ಪೇೞ್ ಹಿಮಾಂಶು ಸುರಮಂತ್ರಿಗೆ ಸೋಲ್ತೊಡೆ ಕೇಡು ಪುಟ್ಟುಗುಂ
(ಇಂತು ಗ್ರಹಂಗಳ ಸ್ವರೂಪ ಫಲಂ) || ೯೨ ||

೧೦. ಗ್ರಹವೇಧಾಚಾರ ಫಲಂ

ವ|| ಇನ್ನು ಗ್ರಹವೇಧಾಚಾರಮಂ ಪೇೞ್ವೆಂ—

ಕಂ|| ಪೆಱಗೆ ರವಿ ನಡುವೆ ಶುಕ್ರಂ |
ಜಱುಚೇಂ ಶನಿ ಮುಂದೆ ನಡೆಯೆ ಬೞಗುಂ ಮೞೆಗಳ್ ||
ಪೆಱಗೆ ರವಿ ನಡುವೆ ಮಂದಂ |
ಮಿಱುಗುವ ಭೃಗು ಮುಂದೆ ನಡೆಯೆ ಕಱೆಗುಂ ಮೞೆಗಳ್ || ೯೩ ||

ಭೃಗು ಪೆಱಗೆ ನಡುವೆ ಚಂದ್ರನ |
ಮಗನಲ್ಲಿಂ ಮುಂದೆ ಭಾನು ನಡೆವಾಗಳ್ ಬೆ ||
ಟ್ಟುಗ[4]ಳೆಲ್ಲಬೀ(ಮಾ)ೞ್ವನಂ ಬೆ |
ಳ್ಮುಗಿಲ್ಗಳ್ ಮಗುೞ್ದಿರ್ ಪರ್ವಿ ಕಱೆಗುಂ ಮೞೆಯಂ || ೯೪ ||

ಸುರಗುರುವಿನ ಮುಂದೆ ನಿಶಾ |
ಕರತನಯಂ ಬುಧನ ಮುಂದೆ ರವಿಯಾತನ ಮುಂ ||
ದಿರದೆ ಭೃಗು ನಡೆಯೆ ವಿಶ್ವಂ |
ಭರೆಗೆಲ್ಲಂ ಮುಚ್ಚುವಂತೆ ಪೆರ್ಮೞೆ ಕೊಳ್ಗುಂ || ೯೫ ||

1 ದರವಲ್ಲವಗ್ರಹದಿ. 2 ಪೊಗೞಲಱಿದು. 3 ಪೇೞ್ದು, ಪರಿವಿಡಿಯಿಂ. 4 ಳೊಡ ಮುಱುಗಲಾ ಬೆಳು ಮುಗಿಲೆಲ್ಲ ಮಗುರ್ವಿ, ಮುಱುಗುವುನಂತೆಕೃತ । ಯುಗದಂತೆ ಸುಭಿಕ್ಷಮೆಲ್ಲಿಯುಂ.

ಕಂ|| ದಿನಕರನ ಮುಂದೆ ಧಾತ್ರೀ |
ತನಯುಂ ಕುಜನಿಂದೆ ಮುಂದೆ ಭೃಗುತನಯುಂ ನಿ ||
ರ್ವನಿಸದೆ ನಡೆದೊಡೆ [1]ಮಟಿ ಬೇ |
ಟ್ಟ ನಿತುಂ ತಪ್ಪಿಲ್ಲದಕ್ಕುಮೆಂದಂ ಖಟ್ಟಂ || ೯೬ ||

*ದಿನಪನ ಮುಂದೆ [2]ನಿಶಾಕರ |
ತನಯಂ ಶಶಿತನಯನಗ್ರದೊಳ್ ಭೃಗುತನಯಂ ||
ಮನವೊಸೆದು ನಡೆಯುತಿರೆ ಬಡ |
ಪನಿ[ಪನಿ]ಗುಂ ಪಿರಿಯ ಮಟಿಗಳಾಗವವಶ್ಯಂ || ೯೭ ||

ತ್ರಿವಿಧಿ|| ಭೂತಳಾತ್ಮಜ ರವಿಜಾತರ ಮುಂದತಿ |
ಪ್ರೀತಿಯಿಂ ಭೃಗುಜ ನಡೆಯೆ ಪೆರ್ಮಟಿಯಕ್ಕು |
ಮೇ [3]ತೊದಳೆಂದಂ ನಯಬಂಧೂ || ೯೮ ||

ಕಂ|| ಶನಿಕುಜರ್ಗಿಂದುಗೆ ಸೋಲಲ್ |
ಕನಕಂ ವಕ್ರಿಸಲ್ ರವಿಯ ಶುಕ್ರನ ಮುಂದಾ ||
ಕನಕಂ ನಡೆಯಲ್ ಮೇಣಾ |
ಶನಿಕುಜರೊಂದಾಗಿ ನಡೆಯೆ ಕೊಳ್ಳ(ಳ್ವು)ವು ಮಟಿಗಳ್ || ೯೯ ||

ಗ್ರಹಮೆನಿತನಿತುಂ ತರದಿಂ |
ಗ್ರಹಂಗಳುಂ ಭಾನುರಹಿತಮಿರೆ ಪೊಲ್ಲದುವಂ ||
ಗ್ರಹಮಾಲೆಯೆಂಬರವರ್ಗಾ |
ಮಹೀಸುತಂ ಮುಂದೆ ಪೊಲ್ಲ ಶುಭಮಿರೆ ಶುಭದಂ || ೧೦೦ ||

(ಇಂತು ಗ್ರಹವೇಧಾಚಾರ ಫಲಂ)

೧೧. ಗ್ರಹ ವಕ್ರ ಫಲಂ

ವ|| ಇನ್ನು ಗ್ರಹ ವಕ್ರಮಂ ಪೇೞ್ವೆ—

ಚಂ|| [4]ಸಿತನನುರಾಗದಿಂ ಮಘೆಯೊಳುತ್ತರಷಾಢೆಯೊಳಿರ್ದು ವಕ್ರಿಸು |
ತ್ತ ತಿಮುದದಿಂದಮಸ್ತಮಿಪೊಡಂತರಸಿಂಗೆ ಭಯಂ ಪಿರಿದರ್ಥ[5]ಹಾನಿ ಸ ||
ನ್ನುತ ವರುಷಂಗಳಾಗವು ಮಹಾಹವದೊಳ್ ತ್ರಿಕಳಿಂಗ ಭೂ[6]ಮಿಪರ್ |
ಮತಿಗಿಡುವನ್ನಮನ್ನೆಯುಮ ಪೆರ್ಚುಗುಮೆಂದಪನಲ್ತೆ ಖಟ್ಟಗಂ || ೧೦೧ ||

---

1 ಮಳೆ ಬೆಳಸುಯಿನತಂ (ಸನಿಕುಂ?) 2 ಚಂದ್ರನ. 3 ತೊದಳಿಲ್ಲೆಂದಂ – ಭೂತಳಾತ್ಮಜನಮುಂದೆ ರವಿಜಾತದಿಂ ಮುಂದತಿ. 4 ಶನಿ. 5 ಮಿಲ್ಲ. 6 ಮಿಾಪತಿಕೆಡುವನ್ನ.

*ಕುಜಜ್ಞಾ ಜೀವರವಿಜಾಃ ಶುಕ್ರಸ್ಯಾಗ್ರೇಸರಾ ಯದಿ ।
ಝುಂಝಾತಿವಾಯು ದುರ್ಭಿಕ್ಷಂ ಜಲನಾಶಕರಸ್ತಥಾ ॥

—ಎಂಬ ಸಂಸ್ಕೃತ ಶ್ಲೋಕವು ಒಂದು ಪ್ರತಿಯಲ್ಲಿದೆ.

ಕಂ|| ಧರಣಿಜನುಂ ಶನಿಯುಂ ಕೇ |
ಸರಿಯೊಳ್ ಧನುವೃಷಭಮೀನದೊಳ್ ವಕ್ರಿಪೊಡೀ ||
ಧರೆಯು ನರತುರಗ ಗೋಕುಲ |
ಮಿರದೞಿಗುಂ ಮೂಱುಭಾಗದೊಳಗೊಂದುೞಿಗುಂ || ೧೦೨ ||

ಚಂ|| ಹರಿ ವೃಷ ಮೀನ ವೃಶ್ಚಿಕ ಶರಾಸನ ಗೇಹದೊಳರ್ಕಪುತ್ರನುಂ |
ಧರಣಿಯ ಸೂನುವುಂ ನೆರೆದು ವಕ್ರಿಸೆ ಪೆರ್ಬಸ(ಱ)ವುಕ್ಕು ಮಿರ್ದರುಂ ||
ತು(ತ್ರ್ವ)ೀಪ(ತ)ದೊಳೊರ್ವರೊರ್ವರನೆ 1ಕಂಡೊಡೆ ವಕ್ರಿಪೊಡೊಂದು ತಿಂಗಳಂ |
ತರಮುವರಿಂದಮುಪ್ಪ ಬಱನುರ್ವಿಗೆಯೆಂದಪನಲ್ತೆ ಱಟ್ಟಗಂ || ೧೦೩ ||

ಕಂ|| ಮಂದಾಂಗಾರಕರಿರ್ವರು |
ಮೊಂದೆಡೆಯೊಳ್ ನಿಂದು ವಕ್ರಿಸಲ್ ಪಶು ಕಱಿಗುಂ ||
ತಂದು ಪೊಲಿವನೆ(ಗೆ)ಯೊಳರಸುಗ |
ಳಂದೊರ್ವರನೊರ್ವರಿಱಿದು 2ಸಾ(ವರ್)ವುಗೆ ಜಗದೊಳ್ || ೧೦೪ ||

ಸ್ವಾತಿಯೊಳಾರಂ ವಕ್ರಿಸೆ |
ಮಾತೇಂ ಮೞೆಯಿಲ್ಲ ರವಿಭೃಗುಜರ ಮುಂದಿ ||
ರ್ದಾತಂ ನಡೆವೊಡೆ ಜಲದ |
ವ್ರಾತಂಗಳ್ ನೆಱೆಯೆ ಕೆಟ್ಟುವೞಿವೞೆಯುಕ್ಕುಂ || ೧೦೫ ||

ದಿನಕರನ ಮುಂದೆ ಭೃಗುಱವಿರೆ |
ಪುನರ್ವಸುಪ್ರವರ(ಕಟ) ಋಕ್ಷೆಯೊಳ್ ವಕ್ರಿಸುತುಂ ||
ಕನಕನುದಯದಿಂ ವಿಶ್ವಾ |
ವನಿ ಬೆಳೆಗುಂ ಜನಕ್ಕೆ ಸಂತಸ(ತ)ಂ ಪಿರಿದಕ್ಕುಂ || ೧೦೬ ||

ಚಂ|| ಶನಿಕನಕರ್ಕಳೊಂದೆಡೆಯೊಳಿರ್ದುದಯಿಪ್ಪೊಡೆ ಯಿಂದುಬಿಂಬಮಂ |
ಶನಿಕನಕರ್ಕಳಶ್ರಮುದೆ ಗೆಲ್ವೊಡ4ಮಂಬುಜಪುತ್ರಮಿತ್ರನುಂ ||
ಕನಕನಮಿಕ್ಕು ಪೋದೊಡ ಮುದಗ್ರದೆ ವಕ್ರಿಸುತಿರ್ಕುಮಪ್ಪೊಡಂ |
ದನುಜಕುಜಜ್ಞರಸ್ತಮಯದೊಳ್ ಮೞೆ ಕೊಳ್ವೊ(ಯುಪ್ಪೊ)ಡಮಿಲ್ಲ ವೃಷ್ಟಿಗಳ್
(ಇಂತು ಗ್ರಹ ವಕ್ರ ಫಲಂ) || ೧೦೭ ||*

೧೨. ಗ್ರಹವೇಧ ಫಲಂ

ವ|| ಇನ್ನು ಗ್ರಹವೇಧ ಫಲವುಂ ಪೇೞ್ವೆಂ—

ಕಂ|| ಶೀತರುಚಿ ಶನಿಯನುರ್ಚಿ ಕೆ |
ರಾತಬಲಂ ಕಿಡುಗು ದೇಶ ಮಥುರೆಗೆ ಬಡಗಲ್ ||
ಖ್ಯಾತಿಯ ಕರಹಾಟಂ ಬರ |
ಮೇ ತ್ರೊದ5ಳತಿ(ಟಿ) ವೃಷ್ಟಿಯಕ್ಕುಮಾಗವು 6ಬೆಳೆಗಳ್ || ೧೦೮ ||

1 ಕಾಣುತೆ. 2 ಸಾಯ್ಗೆ? 3 ನಿಲೆ. 4 ನೋಡುಗೆಯಬ್ಜ ಮಿತ್ರನಿಂ. 5 ಕಲ್ಪವೃಷ್ಟಿ. 6 ಮೞೆಗಳ್.
*ಒಂದು ಪ್ರತಿಯಲ್ಲಿ ಇಲ್ಲಿಗೆ—"ಗ್ರಹವಕ್ರಂ ಸಮಾಪ್ತಂ, ಗ್ರಹವೇಧಂ" ಎಂದು ಬರೆದಿದೆ.

ಕಂ|| ಸುರಗುರವನಿಂದು ಭೇದಿಸೆ |
ಪರಿಭವಮುಂ ಸಿಂಧುದೇಶಕಕ್ಕುಮವಶ್ಯಂ ||
ಹರಿಣಾಂಕನ ಭೃಗುವುರ್ಚಲ್ ಗು |
ಜ್ಜರಪತಿ ಕಾಳಿಂಗದೇಶಮಟಿಗುಂ ಕ್ರಮದಿಂ || ೧೦೯ ||

ಖ್ಯಾತಿಯು ಒಧನಂ ಭೇದಿಸೆ |
ಶೀತಕರಂ ಮಗಧಮಾಳವಾಧಿಪರ್ಗೆಲ್ಲಂ ||
ಭೀತಿ ಪಿರಿದಕ್ಕುಮಗ್ಗಳ |
ಮೇ ತೊದಳಿಂಬಾಗಿ ಯರ್ಘಮಟಿಗುಮಮೋಘಂ || ೧೧೦ ||

ಇಂದು ಕನಕನನೆ ಭೇದಿ[1]ಸಿ |
ದಂದಕ್ಕುಂ ಚೋಟಿಸಿಂಘಣರ್ಗತಿಭಯಮುಂ ||
ಕುಂದದು ವರ್ಘಂ ರಣದೊಳ್ |
ಪೊಂದುಗುಂಮರಸರ್ಕಳುಂ ಸಮಸ್ತಾವನಿಯೊಳ್ || ೧೧೧ ||

*ಗ್ರಹಮೆನಿತನಿತುಮನತ್ಯಾ |
ಗ್ರಹದಿಂ ಹರಿಣಾಂಕನುರ್ಚಿಪೋದೊಡೆ ಮಟಿಗಳ್ ||
ಮಹಿತಳಕೆ ಪಿರಿದು ಕಟಿಗುಂ |
ಸಹಜಕವೀಶ್ವರನ ಪೇಟ್ಟ ಸಿದ್ಧಾದೇಶಂ || ೧೧೨ ||

ಅಂಗಾರಕ ಬುಧಗುರು ಭೃಗು |
[2]ಪಂಗುಗಳಿಂದುವನೆ ಭೇದಿಸಲ್ ಜಗದೀಶರ್ ||
ಸಂಗರದೊಳಟಿದು ಮಡಿವರ್ |
ಪೊಂಗುಗು ಧರೆ ನೆತ್ತರಿಂದೆ ಪೆರ್ವಸಮಕ್ಕುಂ || ೧೧೩ ||

ಮಂಗಳ ಬುಧಗುರು ಭೃಗುರವಿ |
ಜಂಗಳ್ ಹಿಮಕರನ ನುರ್ಚಿ ಪೋದೊಡೆ ನೃಪರುಂ ||
ಪಿಂಗದಿಟಿದಟಿವರಾಹವ |
ರಂಗದೊಳಕ್ಕುಂ ಬಟಿಂ ಧರಿತ್ರಿಗೆ ಪಿರಿದುಂ || ೧೧೪ ||

ಉತ್ತರೆ ವಿಶಾಖೆ ಪುಷ್ಯಂ |
ಚಿತ್ತೆ ಮಘಾಸ್ವಾತಿಯಾರ್ದ್ರೆ ಪೂರ್ವಾಭಾದ್ರಂ ||
ಕೃತ್ತಿಗೆ ಪೂರ್ವೆ ಯಮರ್ಕ್ಷಮ |
ನೊತ್ತಂಬಡೆ ಭೃಗುವನುರ್ಚೆ ಪೆರ್ಮಟಿಯಕ್ಕುಂ || ೧೧೫ ||

---

1 ನೆ ಸಿಂಧುಂ ದೇಶಕ್ಕೆ ಪೊಲ್ಲ ಕ್ಷಾರಂ(ಮಂ). 2 ಪಿಂಗುರುಳಿಂದು.

* ಈ ಪದ್ಯವು ಒಂದು ಪ್ರತಿಯಲ್ಲಿಲ್ಲ.

ಕಂ|| ಮೂಲಮನುರಾಧೆ ಹಸ್ತಂ |
ಮೇಲೆನಿಸಿದ ಚಿತ್ತೆ ಜ್ಯೇಷ್ಠೆ ರೋಹಿಣಿ ಮತ್ತಂ ||
[1]ಮೇಲೆ ಪುನರ್ವಸು ಭಗಣದೆ |
ಲೀಲೆಯೆ ಮಿಗೆ ನಡೆಯೆ ಮೞೆಗಳಾಗವು ಬಿಟ್ಟಾ || ೧೧೬ ||

ಸಿತನಿರ್ದ ನೆಲೆಗೆ ಗಿರಿ (೭) ಶರಿ (೮) |
ಗತಿ (೪) ಯೆನಿಸಿದ ನೆಲೆಯೊಳಿನಜನಿರೆ ಮೞೆಯಕ್ಕುಂ ||
ಶತಪತ್ರ ಮಿತ್ರನುಂ ಭೂ |
ಸುತನುಂ ಮತ್ತವರ ನಡವೆ ಸಲ್ಲದೊಡಿ(ಡೆ)ಲ್ಲಂ || ೧೧೭ ||

(ಇಂತು ಗ್ರಹವಕ್ರಂ)

೧೩. ಬುಧನುದಯಂ

ವ|| ಇನ್ನು ಬುಧನುದಯಮಂ ಪೇೞ್ವೆಂ—

ಮ|| ವರವೈಶಾಖದೆ ಗೋಕುಲಕ್ಕೆ ರುಜೆಯುಂ ಮೇಣ್ ಪುಷ್ಯದೊಳ್ [2]ಕೂಡೆ ಡಾ |
ಮರಮುಂ ಶ್ರಾವಣಮಾಸದೊಳ್ ಸೊಗಯಿಸಿರ್ದಾಷಾಢದೊಳ್ ಕ್ಷಾಮಮುಂ ||
ಧರೆಯೊಳ್ ಪೆರ್ಚುಗುಮಿಂದುಜಾತನುದಯಂ ಗೆಯ್ದಂದು ಮಿಕ್ಕಂಟಱೊಳ್ |
ವರುಷಂ ತಪ್ಪದೆ ಕೊಳ್ಗುಮೆಲ್ಲಜನಕಂ ಸಂತೋಷಮುಂ ಪೆರ್ಚುಗುಂ || ೧೧೮ ||

ಕಂ|| ಸಿತಸೌಮ್ಯರೊಂದು ದೆಸೆಯೊಳ್ |
ಶ(ಸ)ತಮಲ್ಲದೆ ಕೂಡಿನಿಂದೊಡಕ್ಕುಂ ಮೞೆಗಳ್ ||
ಸಿತಸೌಮ್ಯರ ನಡುವಣ ಕುಜ |
ಸತತಂ ಶನಿ ನಿಲಲು ಧರೆಗೆ ಕೊಳ್ಳವು ಮೞೆಗಳ್ || ೧೧೯ ||

ಉತ್ತರೆ ಮೂಱುಂ ರೋಹಿಣಿ |
ಮತ್ತಂ ಮಘೆಯಾರ್ದ್ರೆ ಯೆಂಬ ರಿಕ್ಷೆಯೊಳಾರಂ ||
ಪತ್ತಿ ನಡೆಯುತ್ತುಮಿರೆ ಮೞೆ |
ಯುತ್ತಮಮೆನಲಲ್ಪಮ(ಪ್ಪ)ಲ್ಪಮೆಂದಂ ಬಿಟ್ಟಂ || ೧೨೦ ||

ಶನಿ [3]ಜಾಮಿತ್ರದೊಳುಚ್ಚದೊ |
ಳನುನಯದಿಂ ಶುಭಗ್ರಹಂಗಳುಂ ಚಂದ್ರಮನಂ ||
ಮನಮೊಸೆದು ನೋಡೆ ವಿಶ್ವಾ |
ವನಿ ಬೆಳೆಗುಂ ಮನಕೆ ಬಂದ ಧಾನ್ಯವ್ರಜಮಂ || ೧೨೧ ||

ಶುಕ್ರನಿರಲ್ ಕೆಲದೊಳ್ ನಿಜ |
ವಿಕ್ರಮದಿನಸುತನುಮಾರನುಂ ನಡೆವೊಡೆ ಪೂ ||
ರ್ವಕ್ರಮಮಾಗವು ಮೞೆ ಭೂ |
ಚಕ್ರದೊಳಂ ಮಹೀಶರೊರ್ವರೊರ್ವರ ನಿಱುಗುಂ(ವರ್) || ೧೨೨ ||

1 ಸಲೆ, ಸ್ವಾತಿ. 2 ಉಡು, ಕೋಡೆ, ಅಗೆ. 3 ನಿಶಾಚರ ಮಿತ್ರನೊಳ.

ಕಂ|| ಸುರಗುರು ಮಿಥುನದೊಳಿರೆ (ದಿತಿಜ) ದ್ಯೆ |
ತ್ಯರಗುರು ಬಂದಲ್ಲಿ ಪೊಕ್ಕೊಡಾ ನೆಲಕೆಲ್ಲಂ ||
ಪಿರಿದುಂ ಭಯಮಕ್ಕುಮದನಾ |
ಳ್ವರಸುಗಳುಂ ತಮ್ಮೊಳಿಱಿದು ಮುಮ್ಮಳಿಯಪ್ಪರ್ || ೧೨೩ ||

ಮ|| ಗುರುವುಂ ಶುಕ್ರನು ಮೊಂದುರಾಶಿಯೊಳಿರಲ್ ಶುಕ್ರಂಗೆ ಭೂಜಂ ಪರ |
ಸ್ಪರನಾಗುತ್ತಿರೆ(ತಾಂ) ಸಿತಂ ಗುರುವುಮಂ ಜಾಮಿತ್ರದೊಳ್ ನೋಡೆಯುಂ ||
ವರುಷಾಡಂಬರಮಿಲ್ಲ ಭೂಪರಿಱಿವರ್ ತೀಕ್ಷ್ಣಾಂಶುವಿಂ ಸೌಮ್ಯನಿಂ |
ತ್ವರಿತಂ ಶುಕ್ರನೆ ಮಿಕ್ಕು ಪೋಗೆ ಮುಱಿಗಳ್ ಕೊಳ್ಗುಂ ಧರಾಚಕ್ರದೊಳ್ || ೧೨೪ ||

ಮ|| ಪುದಿದಾದ್ರಾರ್ದಿಯ ಪಂಚರಿಕ್ಷೆಗಳೊಳಂ ಚಂದ್ರಾತ್ಮಜಂ ರಾಗದಿಂ |
ಉದಯಂ ಗೆಯ್ದಿರಲಸ್ತಮಕ್ಕೆ ನಡೆಗಂತೆಂತಾದೊಡಂ ಭೂಪರೊಳ್ ||
ಕದನಂ ಪೆರ್ಚುಗುಮಂತೆ ಗಾಳಿಯೊಗೆಗುಂ ಕುತ್ತಂಗಳುಂ ಪುಟ್ಟುಗುಂ |
ಮು(ಮ)ದಮೆತ್ತಂ ಪ್ರಜೆಗಾಗದಾಗಪವಿದರ್ ಕೇಳಿಂ ಮಹಾಚೋದ್ಯಮಂ || ೧೨೫ ||

ಚಂ|| ಮೃಗಸಿರೆಯುಂ ಧನಿಷ್ಠೆ ಶ್ರವಣಂ ಶಕಟಾನಳನೆಂಬ ರಿಕ್ಷೆಯೊಳ್ |
ವಿಗತಭಯಂ ಬುಧಂ ನಡೆಯಲಂತುದಯಂಗೆಯಲಸ್ತಮಾನದೊಳ್ ||
ಸುಗಿದಿರಲಿಲ್ಲ ನಾಡೆ ಮುಱಿ ಕುತ್ತಮ ಪೆರ್ಚುಗುಮರ್ಘಮಿಲ್ಲ ಕೆ |
ಯ್ದುಗಳನೆ ಮಾಱಿ ಸಿಂಪಿಗೆಯ ಪುಲ್ವಿಡಿವರ್ ಸುಭಟರ್ ಧರಿತ್ರಿಯೊಳ್ || ೧೨೬ ||

ಮ|| ನುತಹಸ್ತಾದಿಯೊಳಾಱುರಿಕ್ಷೆಗಳೊಳಂ ಚಂದ್ರಾತ್ಮಜಂ ನೆಟ್ಟನು |
ದ್ಯತನಕ್ಕಸ್ತಮಯಕ್ಕೆ ಸಲ್ಗೆ ನಡೆಯುತ್ತಿರ್ಕಂತು ಕೇಡುಂ ಮನಃ ||
ಕ್ಷತಮುಂ ವ್ಯಾಧಿಯುಮುಣ್ಮೆ ಧಾತ್ರಿ ಬಱಗುಂ ಆ(ಸಾ)ವೆ(ಲೆ)ಮ್ಮೆಯುಂ [ನಾಡೆ] ಪೋ |
ಗುತೆ ಬೆಳ್ಪಾಡೆನೆ ಕೊಂಡು ಪಾಲನುಣುತಿರ್ಕುಂ ತಾಂ ಬಱಂ ಪೋಪಿನಂ || ೧೨೭ ||

ಕಂ|| ಭರಣಿಯೊಳೆಸೆವಾ ಮೂಱು |
ತ್ತರೆಯೊಳಮುದಯಿಸುವ ನಡೆವ ಬುಧನಿಂ ಮುಱಿಗಳ್ ||
ನಿರತಿಶಯಮಾಗಿ ಕಱಿಗುಂ |
ಪರಮೋತ್ಸಹಮಕ್ಕು ಮಾದ ಕುತ್ತಂ ಕಿಡುಗುಂ || ೧೨೮ ||

ಕುಂದದೆ ಮೂಱುಂ ಪೂರ್ವೆಯೊ |
ಳಿಂದುಜನುದಯಾಸ್ತಮಾನನಾ(ಮಾ)ಗಿರೆ ನಡೆಯಲ್ ||
ಕುಂದುಗುಮರ್ಘಂ ಮುಱಿಯಿ |
ಲ್ಲೆಂದುಂ ಪ್ರಜೆಗಕ್ಕುಮಾವುಯಾದಿ ಭಯಂಗಳ್ || ೧೨೯ ||

ಹಸ್ತಾದಿಯಾಱು ರಿಕ್ಷೆಯೊ |
ಳಸ್ತಮುಮಾದ್ರಾರ್ದಿಯಯ್ದು ರಿಕ್ಷೆಯೊಳುದಯಂ ||
ವಿಸ್ತರಿಕುಂ ದೋಷಮುನುದ |
ಯಾಸ್ತಮುಮಿಂತಿಲ್ಲದಾಗಳಿಂದುಜನುದಯಂ || ೧೩೦ ||

ಕಂ|| ಶತಭಿಷೆಯು[1]ಶ್ವಿನಿ ಮೂಲ |
ಪ್ರತತಿಯೊಳಿರ್ದುದಯಗೆಯ್ಯೆ ರಿಕ್ಷ ಸೌಮ್ಯಂ ||
ಕ್ಷಿತಿತಳದೊಳ್ ಮಱೆ ತಪ್ಪದು |
ಕ್ಷಿತಿಪ(ತಿಯು)ಹಯಾಧಿಪರ್ಕಳಟ್ಕುಱೆ ಸಾವರ್ || ೧೩೧ ||

(ಇಂತು ಬುಧನುದಯಾಸ್ತಮಾನಂ)

೧೪. ಶುಕ್ರನಾಱು ವೀಧಿ

ವ|| ಇನ್ನು ಶುಕ್ರನಾಱು ವೀಥಿಯಂ ಪೇೞ್ವೆಂ—

ಉ|| ಮೂಲದೆ ತೊಟ್ಟು ನಾಲ್ಕಱ ಧನಿಷ್ಠೆಯ ಷಟ್ಕದೆ (೭೮) ಕಾಲನೆಂಟಱೊಳ್ |
ಸಾಲೆ ಮಘಾದಿ ಪಂಚಕದೆ ವಾಯುಚತುಷ್ಕದೆ ದೈತ್ಯಮಂತ್ರಿ ಸ ||
ಯ್ಯಾಲಯಕೆಯ್ದೆ ಸೌಮ್ಯಯಶೀತಿ ಸಪ್ತತಿ ಷಷ್ಟಿ ಶತಾರ್ಧ ಧಾತ್ರಿಯೊಳ್ |
ಲೀಲೆಯೆ ಮಾಡುಗುಂ ಪಡುವ ಸೋನೆಗಳಲ್ಲದೆ ಧಾತ್ರಿ ಪೂರ್ವದೊಳ್ || ೧೩೨ ||

ಚಂ|| ಭರಣಿಚತುಷ್ಕಮುಂ ಪ್ರಥಮಮಾರ್ದ್ರೆ ಚತುಷ್ಕಮದುಂ ದ್ವಿತೀಯಕಂ |
ಭರದೆ ಮಘಾದಿ ಪಂಚಕಮೆನಲ್ ತ್ರಿತಯಂ ಪವಮಾನನಾದಿಯಾ ||
ದರದ ಚತುಷ್ಕಮಯ್ದವರ ಜ್ಯೇಷ್ಠೆಯ ಪಂಚಕಮಾ ಧನಿಷ್ಠೆಯೊಳ್ |
ಬೆರಸಿದ ಷಟ್ಕಮಾಱನೆಯಮಾರ್ಗಮಿದಂ ಬಗೆ ಱಟ್ವನಿಷ್ಟದಿಂ || ೧೩೩ ||

ಕಂ|| ಭರಣಿ ಚತುಷ್ಕದೊಳುದಯಿಪ |
ಚರಿಯಿಸುವಸ್ತಮಿಪ್ಪ ಶುಕ್ರನಿಂ ಪಶುಗೆ ಭಯಂ ||
ಧರೆ ಬೆಳೆಗು ಮೆಲ್ಲಿಯಾನುಂ |
ಪಿರಿದಕ್ಕುಂ ಮಱೆ ಧರಿತ್ರಿಯೊಳ್ ನಯಬಂಧು || ೧೩೪ ||

ಚಂ|| ಅಱಕೆಯ ಶುಕ್ರ[2]ನಾರ್ದ್ರೆ ಮೊದಲಾಗಿರಲೊಳ್ಪಿಹ ನಾಲ್ಕು ರಿಕ್ಷೆಯೊಳ್ |
ನೆಱೆಯಂತು ಮಿರ್ಪೊಡಂ ನಡೆವೊಡಂ ಶಯನಸ್ಥಿತನಕ್ಕುಮಪ್ಪೊಡಂ ||
ಕೊಱೆ ನೆಲು ಜೋಳಮುಂ ಕಟವೆಯುಂ ಬೆಳೆಗುಂ ಮಱೆಕೊಂಡು ಮಾಟದೊಳ್ |
ಪಱುಗೊಲನಿಕ್ಕುವರ್ ದ್ವಿ[3]ಜರ್ಗೆ ಮುಂದೆ ಭಯಂ ಜಿನಧರ್ಮವತ್ಸಲಾ || ೧೩೫ ||*

ಚಂ|| ಎಸೆವ ಮಘಾದಿ ಪಂಚಕದೊಳಸ್ತಮಯೋದಯಗಾಮಿಯಾಗುತಿ |
ರ್ಪಸುರರ ಮಂತ್ರಿಯುಂ ಜನ(ಗ)ಕೆ ಬಾಧೆಯೆ ಪುಟ್ಟುಗು ಮರ್ಘಮಿಲ್ಲ ಗೋ ||
ಪ್ರಸರಕೆ ಪೊಲ್ಲ ಭೂಭುಜರ ತೇಜಮಡಂಗುಗುಮೆಂದು ಧಾತ್ರಿಯೊಳ್ |
ಪುಸಿವರಶೂಲನೆಂಬ ಕವಿಭಾಷಿತಮಿಂತಿದು ತಪ್ಪಲಕ್ಕುಮೇ || ೧೩೬ ||

ಕಂ|| ಸ್ವಾತಿ ತ್ರಯದೊಳ್ ಗಮನೋ |
ದ್ಯೋತಾಸ್ತಮಯಿಪ್ಪ ಶುಕ್ರನಿಂ ಪಶುಗೆ ಭಯಂ ||
ಮಾತೇಂ ತೆಱೆಗೊಳ್ವರ್ ಸಂ |
ಪ್ರೀತಿಯ ನೃಪಸಮಿತಿ ಮುಳಿದು ತಮ್ಮೊಳಗಿಱುವರ್ || ೧೩೭ ||

1 ಶ್ವಿನಿ ರೋಹಿಣಿ ಮೂಲ, ಶ್ವಿನಿ ರೇವತಿ ಮೂಲ. 2 ನಾಲ್ದ ಮೊದ. 3 ಗರ್ಮುಂಟು.
* ಇಲ್ಲಿ "ಭರಣಿ......" ೧೩೩ನೆ ಪದ್ಯವಿದೆ.

ಮ|| ವರಜ್ಯೇಷ್ಠಾದಿಯ ಪಂಚರಿಕ್ಷಗೆ ಸಿತಂ ಗ್ರಸ್ತೋದಯಾಚಾರದೊಳ್ |
ಚರಿಯಿಪ್ಪಂದಣಮಿಲ್ಲ ವೃಷ್ಟಿ ಪಶುಗಳ್ ಗೆಂಟಕ್ಕುಮುರ್ವೀಶರುಂ(೦೨) ||
ಧುರದೊಳ್ ಕಾದುವರರ್ಥ[1]ಹಾನಿಯಬಟಾಗುಂ ಧರ್ಮಂಗಳಿಂದಿಂತಿದಂ |
ಧರೆಗೆಲ್ಲಂ ತಿಳಿವಂತು ಪೇಟ್ದ ನಭಯಂ,ಸದ್ವ್ಯಕ್ತ್ವ ರತ್ನಾಕರಂ || ೧೩೮ ||

ಚಂ|| ಭೃಗುತನಯಂ ಧನಿಷ್ಠೆ ಮೊದಲಾಗೆಸೆವಾಱಱೊಳಸ್ತಮಿಪ್ಪೊಡಂ |
ಮಿಗಿಲುದಯಿಪ್ಪೊಡಂ ನಡೆವೊಡಂ ಸಲೆ ಭಾವಿಸಿ ನೋಡೆ ಪೇಟ ಧಾ ||
ತ್ರಿಗೆ ಮಱಿ ಕೊಳ್ವುದಂ ಬೆಳೆವುದಂ ಮಿಗೆ ಕಳ್ಳರಿನಪ್ಪ ಬಾಧೆಯುಂ |
ನಿಗದಿಪುದಾಱುವೀಥಿಯ ಫಲಾಫಲಮಂ ಬುಧರೊಲ್ದು ಬಣ್ಣಿಸಲ್ || ೧೩೯ ||

ಕಂ|| ಸ್ವಾತಿ ಮೊದಲಾಗೆ ಮೂಱುಂ |
ಖ್ಯಾತಿಯ ರಿಕ್ಷಗಳೊಳ್ [2]ಶನಿ ನೆಲಸುವೊಡೆ ಜಗ ||
ತ್ಪ್ರಖ್ಯಾತಗುಣ ಜ್ಯೇಷ್ಠೆಯಾದಿಯ |
ಭೂತರ್ಕ್ಷದೆ ಮಱಿಗಳಕ್ಕು ಮೊಳ್ಪಿನ ಜಟ್ಟಾ || ೧೪೦ ||

ಸಂದ ಮಘಾ ಪಂಚಕದೊಳ್(ಳ) |
ನಿಂದಿತಗುಣ ಮೂಡ ಪಡುವ ಜ್ಯೇಷ್ಠಾದಿಗಳೊಳ್ ||
ಬಂದುತ್ತರಮಂತಲ್ಲದೊ |
ಡೆಂದುಂ ಕಡುಪೊಲ್ಲ ಭೃಗುಜನುದಯಾಸ್ತಮಯಂ || ೧೪೧ ||

ಉ|| ಮೂಡ ಮಘಾದಿ ಪಂಚಕದೊಳಂ(ಳಾ) ಭೃಗುನಂದನನಸ್ತಮಿಪ್ಪೊಡಂ |
ಮೂಡುವೊಡಂ ಮಹಾವರುಷಮೆಂಬುದು ಶುಕ್ರನೆ ಜ್ಯೇಷ್ಠೆಯಯ್ದಱೊಳ್ ||
ಮೂಡುಗೆ ಪಕ್ಕೆ ಸಾರ್ಗೆ ಕರಮೊಳ್ಳಿತು ಕೇಳ್ ತ್ರಿ[ಕ]ಷಟ್ಕರಿಕ್ಷೆಯೊಳ್ |
ಮೂಡುಗೆ ಪಕ್ಕೆ ಸಾರ್ಗೆ ಶುಭದಂ ತಡವೇಂ ಶುಭಮೆಂದ ಜಟ್ಟಿಗಂ || ೧೪೨ ||

ಕಂ|| ಸಂದ ಮಘೆಯಯ್ದಱೊಳ್ ಭೃಗು |
ನಂದನನಸ್ತಮಿಸೆ ಜ್ಯೇಷ್ಠೆಯಯ್ದಱೊಳುದಯಿ ||
ಪ್ಪಂತು ಮಱಿ ಮಧ್ಯಮಂ ಪಡು |
ವೊಂದಿದ ಜ್ಯೇಷ್ಠೆಯೊಳ್ ಪಡುವಮುದಯಿಸೆ ಮಘೆಯೊಳ್ || ೧೪೩ ||

ಭೃಗುವೇಟುದಿನಕ್ಕಸ್ತಮಿ |
ಸುಗುಮೆನೆ ಮಱಿ ಕೊಂಡುದಿಲ್ಲ ಮೇಗಣ ಮಱಿಗಳ್ ||
ಭೃಗುವೇಟುದಿವಸದೊಳ್ ಮೂ |
ಡುಗುಮೆನೆ ಮಱಿ ಮುಂಚಿಕೊಂಡೊಡೊಳ್ಳಿತು ಜಟ್ಟಾ || ೧೪೪ ||

1 ಮಿಲ್ಲ ಕಿಡುಗುಂ. 2 ಮಿಾಸನ ನೆಸಗಾವಡೀ.

ಉ|| ಕಾಳದ ಬೂದಿಯುಂದು ನೆಗಲ್ದಷ್ಟಮಿಯುಂದಮವಾಸೆಯುಂದು ಸ |
ಲ್ಲೀಳೆಯು ಭಾರ್ಗವಂಗೆ ಶಯನೋದಯ ಮಾರ್ಗದೊಳೊಂದಿದಂದು ಕೇಳ್ ||
ಜೋಳವಸಾಕುಳಂ ಬೆಳಗು ಮೊಡ್ಡಿಸವಿಟ್ಟಿಗಳರ್ಘಮಕ್ಕು ಮಾ |
ರ್ಕೇಳಿಸದೀವರಾದರದೆ ಜೀವಿತಮಂ ಧರಣೀತಳಾಧಿಪರ್ || ೧೪೫ ||

ಉ|| ಶ್ರಾವಣ ಮಾಘ ಮಾರ್ಗಶಿರ ಕಾರ್ತಿಕದೊಳ್ ವೃಷಭೇಂದ್ರಗೇಹದೊಳ್ |
ಭಾವಿಸೆ ದೈತ್ಯಮಂತ್ರಿಯುದಯಂಗೆಯೆ ಪೆರ್ವಸಮಕ್ಕು ಮಲ್ಲದಂ ||
ಧೀವಿಧದಿಂದ ಮಾಗ್ರಹಣಮಕ್ಕುಮಣಂ ಮಟಿಯಾಗದೆಂದು ರಾ |
ಜೀವಜ(ರ)ವಂಶಜ(ಂ)ರ್ ನಿಜತನೂಜಗೆ ಪೇಟ್ದುದು ತಪ್ಪಲಕ್ಕುಮೇ || ೧೪೬ ||

ಕಂ|| ರವಿಯಿಂ ಭೃಗು ಬಡಗೊಗೆದತಿ |
ಜವದಿಂದಂ ತೆಂಕ ನಡೆಯೆ ತಡೆಗುಂ ಮಟಿಯು ||
ರ್ಘಪಿಟಿವುದು ತೆಂಕೊಗೆದುತ್ತ |
ರವಡರ್ದೆಸಗಲ್ ಮಟಿಯಕ್ಕು ಮರ್ಘಮುಮಕ್ಕುಂ || ೧೪೭ ||

ಮಾರ್ಗದ ಫಲಮಂ ನಿನ್ನನು |
ಮಾರ್ಗತೆಯಂ ಪೇಟ್ದುದಕ್ಕೆ ಯೆಡದಿಂ ಬಲದಿಂ ||
ಭಾರ್ಗವನುದಯಾಸ್ತಮಯುದ |
ಮಾರ್ಗದ [1]ಬಲನೆಡನ ನಱಿದು ಪೇಟ್ವುದು ಫಲಮಂ || ೧೪೮ ||

ಉ|| ಉತ್ತರ ವೀಧಿಯೊಳ್(ಗಾ) ಭರಣಿಯಾದಿಯೊಳೊಂಬತು ಮಧ್ಯಪೀಧಿಗ(ಗಾ) |
(ಮು)ತ್ಯುತ್ತಮಮಪ್ಪ ಪುಬ್ಬೆ ಮೊದಲಾಗಿರಲೊಂಬತು ತೋಯರಿಕ್ಷೆಯೊಳ್ ||
ಪತ್ತಿದ ರಿಕ್ಷೆ ಯೆಂಬತದು(ನೆ) ದಕ್ಷಿಣವೀಥಿಯೊಳೆಂಬ ಭೇದಮಂ |
ಚಿತ್ತದೊಳೊಳ್ಪತಾಗಱಿಗೆ ಭಾನು ಪಥಾಕ್ರಮಮಿಂತಿವೆಲ್ಲಮಂ || ೧೪೯ ||

ಕಂ|| ಭಾನುವಿನೆಡಬಲದೆಡೆಯೊಳ್ |
ದಾನವಗುರುವುದಯಿಸುತ್ತುಮುತ್ತರ ವೀಥೀ ||
ಸ್ಥಾನದೊಳೆ ನಡೆಯೆ ಧಾನ್ಯವ |
ನೂನಂ ಬೆಳೆಗುಂ ಜನಕ್ಕ ಮೊಳ್ಪಿತುವಕ್ಕುಂ || ೧೫೦ ||

ಉತ್ತರವೀಥಿಯೊಳುದಯಿಸೆ |
ಯುತ್ತರವೀಥಿಯೊಳೆ ನಡೆವ ಧಾನವಗುರುವಿಂ ||
ದುತ್ತರ(ಮ)ಮಕ್ಕುಂ ಬೆಳೆಗು(ಸು)ಂ ನೃ |
ಪೋತ್ತಮರುಂ ಪ್ರಜೆಯನಱ್ತ(ರ್ಥಿ)ಯಿಂಪಾಲಿಸುವರ್ || ೧೫೧ ||

---

1 ಬಲಾಬಲದೊಳಱಿದು.

*ಭೃಗುಜೇಸ್ತಮಿತೇ ಶುಕ್ಲೇ ರಾಜಕ್ಷೋಭಂ ಭಯಾವಹಂ ।
ಕೃಷ್ಣಪಕ್ಷೋದಯೆ ಚೈವಾ ಶುಭಂ ಸವ
—ಈ ಸಂಸ್ಕೃತ ಶ್ಲೋಕವಿದೆ.

ಕಂ|| ಇಂದುಜನ ದಕ್ಷಿಣೋತ್ತರ |
ದೊಂದಿದ ವೀಥಿಯೊಳೆ ನಡೆವಡೊಳ್ಳಿತು ಬುಧನು(ನ)ಂ ||
ಪಿಂದಿಕ್ಕಿ ಶುಕ್ರನುದಯಿಪ್ಪೊ |
ದ(ಡೆ)ಂದಿನತೆಱದಂತೆ ಕೊಳ್ಗುಮೊಳ್ಳಿಹ ವಂಟೆಗಳ್ || ೧೫೨ ||

ಉ|| ರೇವತಿ ಹಸ್ತೆ ಚಿತ್ರೆಯನುರಾಧೆ ಹಯಾದಿಸುರೇಜ್ಯ ರಿಕ್ಷೆಯೊಳ್ |
ಭಾವಿಸೆ ದೈತ್ಯಮಂತ್ರಿಯುದಯಂಗೆಯೆ ಪೆರ್ವಸದಿಂ ಜಗಜ್ಜನಂ ||
ಸಾವು ಮಳುಂಬಮುಕ್ಕು ಮಿನಿತಲ್ಲದೊಡಃರ್ವಿಪರೊರ್ವರೊರ್ವರೊಳ್ |
ಕೇವಲಮಲ್ಲದಾಂತಿಱಿದು ನೆತ್ತರ ಪೆರ್ಗಡಲಕ್ಕುಮೆಲ್ಲಿಯುಂ || ೧೫೩ ||

(ಇಂತು ಶುಕ್ರನಾಱು ವೀಥಿ)

ಇಂತು ಚೌಶಿಷಾಧ್ಯಾಯಂ ಸಪ್ತಮಂ ೭ ಸಮಾಪ್ತಂ.

# ಮುಗಿಲ್ಗಳ ನಾಮಾಧ್ಯಾಯಂ ಅಷ್ಟಮಂ ೮

೧. ಮೇಘ ನಾಮಂ

ವ|| (ಕಾರ್) ಮುಗಿಲ್ಗಳಾಳ್ವ ದೇಶಮಂ (ಮುಮುವಱ ಪೆಸಱಿಂ) ಪೇೞ್ವೆಂ—

ಮ|| ನೆಗೞ್ದೈರಾವತಮಾದಿಯಾಗಿರೆ ಮಹಾಪದ್ಮಂ ಬೃಹತ್ಕುಂಜದಂ |
ಶಿ(ತೆ)ಗಡಂ ವಾಮನಮೆಂಬ ನಾಲ್ಕು ಮುಗಿಲುಂ ಶ್ವೇತಾಂಬುವಿಂ ಕೂಡೆ ಧಾ ||
ತ್ರಿಗೆ ನೀರಂ ಕಱೆಯುತ್ತುಮಯ್ದು ಹಿಮವತ್ಕುತ್ಕೀಲದಿಂ ನಾಕಜಾ |
ಪಗೆಯಂ ತಾಪಿನಮಾಳ್ಗುಮೆಂದನಭಯಂ ಸಮ್ಯಕ್ತ್ವ ರತ್ನಾಕರಾ(ರಂ) ||೧||

ಕಂ|| ಬೆಳಕಂಗಳಾಗಿ ಸುಣ್ಪಂ |
ತೊಳಗುತ್ತುಂ ನೆರೆದು ಮೊೞಗಿ[1]ದೊಡ್ಡಿದ ಪನಿಯಂ ||
ಜಳಜಭವಾನ್ವಯ ಮೇಘಂ |
ವಳಿ ಕಱೆಗುಂ ತುಹಿನ[2]ಶಿಖರಿಯಿಂ ಗಂಗೆವರಂ ||೨||

ಮಂದಗತಿ ಮಂದಚಂದ್ರಂ |
ಸುಂದರಮೃಗ ಮಂದಗ(ನೀ)ತಿ ಮಹಾಸ್ವರ(ಸ್ಪದ)ಮೆನೆ ಜೆ ||
ಲ್ವೊಂದಿರೆ ಮೇಘ ಚತುಷ್ಕಂ |
ಮಂದಾಕಿನಿಯಿಂದೆ ವಿಂಧ್ಯಗಿರಿವರಮಾಳ್ಗುಂ ||೩||

ಕಿಸುವಿನ [3]ಜಾ(ಜಿ)ದಿನ ಬಣ್ಣದ |
ಮಿಸುಗುವ ಮಂಡಲದೆ(ದಿ) ನೆ(ನೊ)ಗೆದು ಗರ್ಜಿಸಿ ಮಿಂಚಿಂ ||
ದೆಸೆವ ನೃಪಾನ್ವಯ [4]ಮೇಘ |
ಪ್ರಸರಂ ಸುರನದಿಯ ವಿಂಧ್ಯದೆಡೆಯುಮನಾಳ್ಗುಂ ||೪||

ಸುರುಚಿರ ವಿದ್ಯುಜ್ಜಿಹ್ವಂ |
ಬೆರಸಿ ಮಹಾನಿಚಯ ಮಂದ[5]ವಿಕ್ರಮ ಶೀಘ್ರಂ ||
ಧರೆಗೆಸೆವ ವಿಂಧ್ಯಗಿರಿಯಿಂ |
ನಿರುಪಮಗೋದಾವರೀತಟಂಬರಮಾಳ್ಗುಂ ||೫||

ಆವೆ(ನೆ)ಯು [6]ಮಕರದ ಪೋಲ್ವೆಯು |
ನಾವೈಶ್ಯಘನಾಳಿ ವಿಂಧ್ಯಗಿರಿಯಿಂದಂ ಗೋ ||
ದಾವರಿಯ[7]ನೆಯ್ದೆ ಕಱೆಗುಮಿ |
ಳಾವನಿಯೊಳ್ ಸದ್ಯ ವೃಷ್ಟಿಯಕ್ಕು ಮೊಳ್ಪಿನ ಬಿಟ್ಟಾ ||೬||

---

1 ತೋರಿಯು. 2 ಕಿರಣದಿಂ. 3 ಬೂದಿಯ. 4 ನಾಯಿಸ್ಯಘನಾಳಿ ವಿಂಧ್ಯಗಿರಿಯಿಂದಂ ಗೋದಾವರಿಯನೆಯ್ದೆ ಕಱೆಗುಂ ಮಿವಳಾಪನಿಯೊಳು ಸದ್ಯ ವೃಷ್ಟಿಯಕ್ಕುಂ ಬಿಟ್ಟು||೩೦|| 5 ವಕ್ರಂ. 6 ಮಕರಂದದ. 8 ನಲ್ಲಱಿದಂದಾ ವರ್ಷಂ ಸಸ್ಯವಿಟ್ಟನೊಳುಪಿನ.

ಕಂ|| ಬಿಂಕದ ಗೋದಾವರಿಯಿಂ |
ಲಂಕೆವರಂ ಸೇ(ಕೇ)ತು ಶಿರಸುಕ ಮಾರಾ(ರೀಂ) ಪರಿಯಂ ||
ತೆಂಕಘನ (ಜನ)ಮೆಂಬ ಮೂಱುಮ |
ಲಂಕರಿಸಿರೆ ಧರೆಯನಾಳ್ಗವೊಳ್ಪಿನ ಅಟ್ಟಾ || ೭ ||

ನಟ್ಟಡವಿಯೊಳಗೆ ಕೊಱೆಯೊಳ್ |
ಬೆಟ್ಟುಗಳೊಳ್ ತೊಟ್ಟನೊಗೆದು [1]ಮಱೆಯಂ ಕಱೆಗುಂ ||
ನೆಟ್ಟನೆ ಗೋದಾವರಿಯಿಂ |
ತೊಟ್ಟು ದಶಾನನಪುರವರಂ [2]ಶೂದ್ರಘನಂ || ೮ ||

ಇಂತು ಪದಿನೆಯ್ದು ಮುಗಿಲುಂ |
ತಂತಮ್ಮಿಕ್ಕೆಡೆಯೆ ತಾವೆ ಕಱೆಗುಂ ಮಱೆಯಂ ||
ಭ್ರಾಂತೇಂ ಪಲವು ಮುಗಿಲ್ಗಳ |
ನಂತಂ ಮತ್ತವಱ ಪೆಸರ್ಗಳಂ ಬಲ್ಲವರಾರ್ || ೯ ||

ಕರ್ರಾರಂಗಳವನಿಪ ದ್ವಿಜ |
ವಾರಿದ ಮತಿಕೃಷ್ಣ ರಕ್ತ ಭಸ್ಮಚ್ಛವಿಯಿಂ ||
ಧಾರಿಣಿಗೊಗೆಗುಮನೇಕಾ |
ಕಾರಚ್ಛವಿಯಿಂ ಜಲಪ್ರದಂ ವರ್ಷಿಸುಗುಂ || ೧೦ ||

ಜಗಕೆ ಜಗತ್ಪ್ರಳಯಂಬರ |
ವೊಗೆದೊಡೆ ಸಂವರ್ತಪುಷ್ಕರಾವರ್ತಕಮ ||
ಲ್ಲಿಗ ಮೊಂದೆ ಮಾಟ್ಕೆಯಿಂ ನೆ |
ಟ್ಟಗೆ ಕಱೆಗುಂ ಜಲಧಿ ಜಲಧಿಯೊಳ್ ಕೂಡುವಿನಂ || ೧೧ ||

(ಇಂತು ಮೇಘ ನಾಮಮುಮವಾಳ್ವ ದೇಶಂಗಳುಂ)

೨. ಮೇಘಂಗಳ ಆಕಾರಂಗಳ್

ವ|| ಇನ್ನು [3]ಮತ್ತಮವಱಾಕಾರಂಗಳಲ್ಲಿ ಪೋಲ್ವೆ(ಪೋಲ್ಲಂ)ಗಳಂ ಪೇೞ್ವೆಂ—

(ಷಡ್ಪಳಿಯೆಂದರೆ ಒಂದುದಂಡಕದಹಾಂಗೆ ಓದುವಣ)

ಷಡ್ಪಳಿ|| ಶ್ರೀಯ ಚಾಮರದ (ಸಟೆಗಳಂ) – ತಿಳಿಗೊಳಂಗಳಂ ||
ತೋಯ ನಿಧಿಯ (ಪರ್ಗೆಱೆಯ) – ಪಿರಿಯ ಸುೞಿಗಳಂ ||
ವಿಮಾನಕುಂಭಮುದವದ್ವಿಪೇಂದ್ರನಂ – ಜೈನ[4]ಮಂದಿರದ ಮೃಗೇಂದ್ರನಂ ||
ಗೋಪುರಂಗಳ ಶಶಾಂಕ ಬಿಂಬಮಂ – ಕೂಪದಾರವೆಯ ಪೂರ್ಣ ಕುಂಭಮಂ ||
ಮೊಸಱೆ(ಣೆ)ಯೊಸಡುಗಳ ಕರ್ಣಿಕಾರಮಂ – ಬಿಸರುಹಾರಿಯ ಮಹಾವಿಕಾರಮಂ ||
[5]ಪರ್ವತ ಪ್ರತತಿಗಳ ಸುಹಾರಮಂ – ಪ(ಸು)ರ್ವ(ರ್ವ್ರ)ಗೊಂಡೆಸೆವ ಲತೆಯ ಗೇಹಮಂ ||

1 ಪಿರಿದುಂ. 2 ಮಂದ್ರಪ್ರುನಂ? 3 ಮತ್ತಾವರೊಳು ತಾರಂಗಳ ಧ್ವನಿಯಂಗ ಪೊಲ್ಲಂಗಳಂ ಪೇೞ್ವೆನು ಮಟ್ಟರಗಳೆ. 4 ಮಂದಿರ[illegible]ಮೃಗೇಂದ್ರನಂದಮಂ. 5 ಸರ್ವತಾ ಪತಿತರಿಗೆ.

ಷಡ್ಜಳ|| ಸುರಮಹೀಜದ ವಿಮಾನ[1]ದಂಚೆಯಂ – [2]ಹರಿಧೃತಾವನದ ನವಿಲ ಕೊಂಚೆಯಂ ||
ತಿಮಿತಿಮಿಂಗಿಳನ ಶಂಖಂಗಳೋಳಿಯಂ – ವಿಮಳಮಪ್ಪ ಪಱಿಕಿನ ಶಿಲಾಳಿಯಂ ||
ಹರನ ಗೋಪತಿಯ ಕಪ್ಪೆಯಾವೆಯಂ – ಪಿರಿಯ ಕನ್ನಡಿಯ ಕಱಿಯನೆಯ್ದಿಲೆಯಂ ||
ಪೊನ್ನಬೆಳ್ಳಿಗಳ ಪೊಳೆವ ಕುಸುಮಮಂ – ಸನ್ನುತಪ್ರ(ಸ)ಕರ ಚಕ್ರವಾಳಮಂ ||
ಭೂತಗಣದ [3]ತೋರಣದ ಮಕರಮಂ – ಪೂತಚೂತ ಬಲಾ(ಲತಾ)
ವಿ(ಕಾ)ತಾನ(ರ)ಮಂ ||
ಪೋಲ್ವೆಯಪ್ಪ ಮುಗಿಲಿಂದೆ ಮೞೆ [4]ಕರಂ – ಸಾಲ್ವಿನಂ (ಕೊಳ್ಗು) ಕಱೆಗುಮೞೆ
ನಿರಂತರಂ ||
ವಿಸುಪ ಕಹಳೆಯ ಪಱೆಯ ಭೇರಿಯಾ – ಬಸವನಂಬುಧಿಯ ಸಾಮಚಾರಿಯಾ ||
ಗಜದ ಶಂಖದ ನಿಸಾದದಿಂ ಕರಂ – ಗಜಱೆ ಮೇಘನಿವಹಂ ಶುಭಂಕರಂ ||
ತೋಳವಾಯಸದ ಮೊಲದ ಕರಡಿಯಾ – [5]ಸೂಲದೊಂದಿರದ ಬೆಂದ ಮೊರಡಿಯಾ ||
ನರಿಯ ಕೋಡ[6]ಗದ ಗೂಗೆ(ಬೆ) ಯಂದಮಂ – ಮರೆಯ ಪಾಟ್ಮನೆಯ
[7]ಬಾಯ್ವೆಱೆಯಂದಮಂ ||
ಕಡಿದ ಮರದ ನಯದೆಮ್ಮೆರ್ ಪೋಱೆಯಾ – ಪೊಡೆವ ಶರಭದ ಪೊಸ ಸೋಗೆಯ
ಗಾಳಿಯಾ ||
ಪುಲಿಯ ನೆರಳೆಗಳ ಪೊಡೆದ ಮಡಕೆಯ – ಪೆಣ [8]ನಟ್ಟೆಗಳ ಪುದಿದ ಕಡಿತಲೆಯ ||
ಪೋಲ್ವಮುಗಿಲಕಣ್ಣಮೞೆಯನಾ(ಲಾ)ರ್ಪೊಡಂ ಕಲ್ಪದುಸ್ಸ್ಥಿತಿಯಮೇಘ ರೂಪಮಂ||
ಪರಿವದೆಸೆಯ ಭಂಡಿಯನಿನಾದಮಂ – ಕೆಡೆದ ಮಡಕೆಗಳುಲಿವ ನಾದಮಂ ||
ಮೊರೆವ ಪಂದಿಗಳ ಕಿಳಿರ್ವನಾದಮಂ – ಕರಡಿಯೊಂಟೆಯ ಕಠೋರನಾದಮಂ ||
ತೊವಲ ಗಿಲಿಗಿಲಿಕೆಯೆಸವನಾದಮಂ – ತೊವಳನೆಳವರೆಯೊಳಾದ ನಾದಮಂ ||
ಮೊರವ ಪಡಕೆಗಳ ಕಿಱುವಾ ನಾದಮಂ – ಪೋಲ್ವೊಡಿಲ್ಲ ಮೞೆಯೆಂದ ಬಿಟ್ಟುಗಂ
|| ೧೨ ||

ಕಂ|| ಸಿರ್ಪಿನ ಬಣ್ಣದ ಮುಗಿಲುಂ |
ನೇರ್ಪಡೆ ಮೞೆಯಾಗದಾದೊಡಂ ಮೞೆ ಕಿಱಿದುಂ ||
ತೋರ್ಪಂತೆ ಪನಿತು ಮಾಣ್ಗುಂ |
ತರ್ಪಿಲ್ಲ ಕಪಿಲವರಹಮಿಹಿರ [9]ಗಾರ್ಗ್ಯರ(ಮತ)ದಿಂ || ೧೩ ||

ಪೊಸನೆತ್ತರ ಗೋರೋಜನ |
ದೆಸೆದಿರ್ದಂಗಲಿಕದಿಂದ್ರಗೋಪದ ರುಚಿಯಿಂ ||
ದೆಸೆವ ಮುಗಿಲಿಂದೆ ಜಗದೊಳ್ |
ಮಸುಱಿಲ್ಲದೆ ಪಿರಿಯ ಮೞೆಗಳಾಗವು ಬಿಟ್ಟಾ || ೧೪ ||

1 ದಂಡದಿಂ. 2 ಹಂಪಿಕಾಸನದ ಕೊಂಬೆಯಂ. 3 ತೋರಣದ ಕಾರಮಂ. 4 ಕಱೆಗುಂ ಸೊಲ್ಲಿನಿಂ ಕೊಳುನೀ ನಿರಂತರಂ. 5 ಸೂಲಮಂದುರದ ಮೊರಡಿಯು ತಾನು ಬೆಂದಂದದಿಂ. 6 ಗಣಿಯ, ದುಂಬಿಯ. 7 ಬಾಯ್ವೆಱೆಯಂತೆ. 8 ನಟ್ಟಗಳ ತಲೆಯ ಕಡಿಗಳಾ ಕರಂ. 9 ವಹಮಿಹಿರ ಗಾರ್ಗ್ಯಮಯ್ಯನ.

ಕಂ|| ಬಿಳಿಯ ಮುಗಿಲ್ಗಳ್ ಪಟ್ಟಿ್ಯ |
ತೊಳೆಯಂ ಪುಂಜಿಸಿದ ಮಾಟ್ಕೆಯಿಂದಂಬರದೊಳ್ ||
ತೊಳತೊಳಗುವ ಮಿಂಚಿಂದಂ |
ದಿಳೆಯೊಳ್ ಜಲಪ್ರಳಯಮಪ್ಪಿನಂ ಮೞೆ ಕೊಳ್ಗುಂ || ೧೫ ||

ಪಂಕರುಹದಲರ್ದ ಮೊಲ್ಲೆಯ |
ಸಂಕದ ಗೋಕ್ಷೀರದಿಂದುಕಾಂತದ ಹಂಸೆಯ ? ||
ಸಂಕುಳದಂದದ ಮೇಘ ಚ |
ಯಂ ಕಱೆಗುಂ ಪಿರಿಯಪೆರ್ಮೞೆಯುಮಂ ಜಗದೊಳ್ || ೧೬ ||

ಎರಡುಂ ಸಂಜೆಗಳೊಳ್ ಗಿರಿ |
ವರಮಂ ಪೋಲ್ತೊಡ್ಡಿ ಮಿಂಚಿ ಮೊೞಗುಂ (ಮೊೞಗಲ್) ||
ಧರಣೀತಳಕ್ಕೆಯುಂ ಭೋ |
ರ್ಗರೆದು ಕಡಲ್ ಕದಡುವನ್ನೆಗಂ ಮೞೆ ಕೊಳ್ಗುಂ || ೧೭ ||

[1]ಹರಿಣಾಂಕಚೂಡನ ದಿಗಂ |
ತರದೊಳ್ ಗಗನದೊಳೆ ಮೊಗೆದು ಮೊೞಗುವ ಮುಗಿಲಿಂ ||
ಪಿರಿದು ಮೞೆ ಕೊಳ್ಗುಮೆಂಬುದು |
ವರಮುನಿಗಳ ವಾಕ್ಯಮೆಂದ ನೊಳ್ಪಿನ ಅಟ್ಟಂ || ೧೮ ||

ಚಂ|| [2]ಗಿಳಿಗಳ ಬಣ್ಣಮಂ ದಿವಿಜಚಾಪದ ಬಣ್ಣಮನಿಂದ್ರನೀಲದು |
ಜ್ಜ್ವಳತೆ(ಳಿಕೆ)ಯ ಬಣ್ಣಮಂ ವಟಫಲಂಗಳ ಬಣ್ಣಮನಾಪಸುರ್ತ ಪು ||
ಲ್ಗಳ ಪೊಸಬಣ್ಣಮಂ ಕಡವಕೊಳ್ಗಳಮಂಡೆಯ ಯೆಣ್ಣೆ ವಣ್ಣಮಂ |
[3]ತಳೆಯದೆ ಗಾಳಿ ಸಂಜೆಯೊಳಗೊಡ್ಡಿರಲೊಳ್ಪುಱೆ ಯಕ್ಕುಮೆಲ್ಲಿಯುಂ || ೧೯ ||

ಕಂ|| ಅಂಚಿರಮಲ್ಲದೆ ಮೂಡಲ್ |
ಮಿಂಚುವೊಡಂ ಬಡಗ ತಣ್ಣೆಲರ್ [4]ತೀಡುವೊಡಂ ||
ಕಾಂಚನವರ್ಣದ ಮೇಘಂಗಳ |
ಗೊಂಚಲ್ಗಳ್ ಪಡುವ ನಡೆವೊಡೊಳ್ಪುೞೆಯಕ್ಕುಂ || ೨೦ ||

*ಆಲದಮರದ ಪೊಲೊಗೆದು ವಿ |
ಶಾಲತೆಯಿಂ ವರ್ತಿಪ್ಪ ಮೇಘದಿಂ ಮೞೆಯಕ್ಕುಂ ||
ಮೇಲಪ್ಪ ಪೊನ್ನತಗಡ ಪೊ |
ಲಾಲೋಕಿಸೆ ಪೊಳೆವೊಡೆಯ್ದೆ ಮೞೆಯುಂ ಅಟ್ಟಾ || ೨೧ ||

---

1 ಹರಿಣಾಂಕಿ ಸಾನ್ಯದಿಗ. 2 ಗಿರಿಗಳ. 3 ತಳರ್ದ ಗಾಳಿಯ ಸಂಜೆ...ಡ್ಡಿರಲೊಪ ಮೞೆ. 4 ಬೀಸು.

*ಯಿಾ ಋಕ್ಷಗಳೊಳು ಮಳೆಗಳುದಾರವತ್ತಂ ಕರದರ್ಗಂ ದೆಂದೆಂತಾರ್ಕೈವಡೆಯೊಳುಪ್ಪುಕ......ಮುಗಿಲಿತ್ತು ರಿಕ್ಷೆ ಜಗಳ ಕರೆರರ್ಗದೆಂದಿಂಯೊಳ್ಕುಂ ॥ ೩೩೬ ॥ ಯಿಾ ನಕ್ಷದೊಳು ಅಕ್ಕುಮಾನುನ......ರಲಕ್ಕುಂ। ಯಿಾ ನಕ್ಷತ್ರದೊಳರಿಗಿಂತೀ ನಯದೊಳು ಮುಗಿಲಮಾಂ ನಾಳಿಂ ಕ್ರಮದಿಂದಂ ॥ ೩೩೬ ॥

—ಎಂಬ ಎರಡು ಅಶುದ್ಧ ಕಂದಗಳು ಒಂದು ಪ್ರತಿಯಲ್ಲಿದೆ.

ಕಂ|| *ಪಲವುಂ ಮತ್ಸ್ಯಾಕಾರದ |
ಜಲದಂಗಳ್ ನಾಲ್ಕುದೆಸೆಗಳಂ ತೋಱಿದೊಡಂ ||
ನೆಲಕೆಲ್ಲಮಕ್ಕು ಮೞೆಯುಂ |
ಸುಲಭಂ ತಾನೆಂದು ಪೇೞೆ ಅಟ್ಟವೆಡಂಗಾ || ೨೨ ||

[1]ಮಂದಿ(ದು)ರದಾನೆಯ ಪರ್ವತ |
ದಂದದ ಜಲಚರಕುಳದ ಸದೃಶದಾ ಮೇಘಂ ||
ಬಂದೆಱಗಿಕೊಂಡ ಮೞೆ ಪಿರಿ |
ದೊಂದುತ್ಸವಕಾರ್ಯ ವಸುಧೆಗಕ್ಕುಂ ಅಟ್ಟಾ || ೨೩ ||

ಮೆಲ್ಲನೆ ಬೀಸುವ ಗಾಳಿಯು |
ಮೆಲ್ಲೆಡೆಯೊಳುಮೆಸೆವ ಮೇಘದಿಂ ಮೞೆ ಕೊಂಡ ||
ಲ್ಲಲ್ಲಿ ಕವಿದೊಡ್ಡಿತೆನಿಸಿದೊಡ |
ದಲ್ಲದೆ ಮೞೆಯೊಳ್ಪಿತಲ್ಲವೆಂದಂ ಅಟ್ಟಾ || ೨೪ ||

(ಇಂತು ಮೇಘಂಗಳ ಆಕಾರಂಗಳ್)

೩. ದಶ(ಸಪ್ತ)ಧಾತುಗಳ ಪ್ರಯೋಗಂ

ವ|| ಇನ್ನು ದಶ(ಸಪ್ತ)ಧಾತುಗಳ ಪ್ರಯೋಗಂಗಳಂ ಪೇೞ್ವೆಂ—

ಕಂ|| ಸುರಧನು ನೀರ್ಗದಿರಭ್ರಂ |
ಪರಿವೇಷಂ ಮಿಂಚು ಮೊೞಗು ಮೞೆಯುಂ ಶೀತಂ ||
ಶರದಂ ಗಾಳಿಯು ಮೆಂಬಿವು |
ಧರೆಯೊಳ್ ದಶಧಾತುವಱಿದು ಪೇೞ್ವುದು ಮೞೆಯುಂ || ೨೫ ||

ಪತ್ತುಂ ಧಾತುಗಳುಂ ಮೆ |
ಯ್ವೆತ್ತಿಯೆ ತಾಂ ತೋಱದಿರ್ದೊಡೊಳ್ಪೞಿಯಕ್ಕುಂ ||
ಮತ್ತವಱೊಳ್ಪಂ ಕಿಡಿಸುವ |
ಚಿತ್ತದೊಳುದಯಿಸುತುಮಿರ್ಕುಮುತ್ಪಾತಂಗಳ್ || ೨೬ ||

ದುರಿತಗ್ರಹಮುತ್ಪಾತದೊ |
ಳಿರಡಿಲ್ಲದೆ ಕೂಡಿನೆಗೞ್ದೊಡಱ [2]ಶುಭಮಶುಭಂ ||
ನೆರವಕ್ಕುಮೆಂದು ಭಾವಿಸೆ |
ಯೆರಡುಂ ಬಲಾಬಲವನಱಿತು ಪೇೞ್ವುದು ಮೞೆಯಂ || ೨೭ ||

ಎನಿತೊಳವು ಮೞೆಯ ಕುಱುಪುಗ |
ಳನಿತುಮನವಧಾರಿಸಿ ಮೞೆಯುನುಂಟೆಂಬರ ಮಾ ||
ತನಿತುಂ ತಪ್ಪುವುದಂತಾ |
ಜನಿಯಿಸಿದುತ್ಪಾತತತಿಯನಱಿಯದೊಡೆಲ್ಲಂ || ೨೮ ||

(ಇಂತು ದಶ(ಸಪ್ತ)ಧಾತುಗಳ ಪ್ರಯೋಗಂ)

1 ಮಂದಾನೆಯ. 2 ಶುಭಾ ಶುಭಮಂ. *ಈ ಕಂದವು ಒಂದು ಪ್ರತಿಯಲ್ಲಿಲ್ಲ.

೪. ಮುಗಿಲ್ಗಳ ದ್ರೋಣಸಂಖ್ಯೆ

ವ॥ ಉತ್ಪಾತಂಗಳಂ ಪರೀಕ್ಷಿಸಿ, ದ್ರೋಣಸಂಖ್ಯೆಯೊಳ್ ನಕ್ಷತ್ರಂಗಳ್ ಕಱೆವೊಡ (ಮದಾ)ದಱ ಫಲಮಂ ಪೇೞ್ವಂ—

(ದ್ರೋಣಮೆಂಬುದು [1]೪ ಕೊಳಗ ನೀರುಮಂ ಕೊಳ್ವುದು ಒಂದು ದ್ರೋಣಂ)

ಕಂ॥ ಪದಿಮೂಱುಂ ದ್ರೋಣದ ಮೞೆ |
ಮೊದಲೊಳ್ ಜಲರಿಕ್ಷೆಯಂದು ಕೊಂಡೊಡೆ ಸಸ್ಯಾ ||
ಭ್ಯುದಯ ಸುಭಿಕ್ಷಾರೋಗ್ಯಾ |
ಸ್ಪದಮಕ್ಕುಂ ಬಱ[2]ಸು ಮಿೞ್ದಿಯುಂ ಕೆಟ್ಟೆರ್ಕುಂ, || ೨೯ ||

ಪನ್ನೆರಡುಂ ದ್ರೋಣದ ಮೞೆ |
ಮುನ್ನಮೆ [3]ವಿಶ್ವರ್ಕ್ಷದಂದು ಕೊಂಡೊಡೆಯೆಲ್ಲಂ ||
[4]ಮುನ್ನಾ ನೆಲ್ಲುವು(ಂ) ಬೆಳೆಗುಂ |
ಉನ್ನತಮತಿವಂತರಾಲಿಪುದು ಖಳಭಯಮಂ || ೩೦ ||

ಶ್ರವಣಂ ಚತುರ್ದಶ ದ್ರೋ |
ಣವನೆಯ್ದಿರಲುಂ ಮುಂಚೆ ಕೊಂಡೊಡಾ ಮೞೆಯಿಂದಂ ||
ಸವನಿಸುಗುಂ ವಿಪ್ರಜನ |
ಕ್ಕವಸ್ಥೆಯೆಂದಱದು ಪೇೞ್ದಿನೊಳ್ಪಿನ ಅಟ್ಟಂ || ೩೧ ||

ತ್ರಿಪದಿ|| ಪದಿನಾಱು ದ್ರೋಣಮಂ ಪಡೆದು ಧನಿಷ್ಠೆಯೊಳ್ |
ಪೊದವಿರೆ ಕಱೆಯೆ ಭಯಮಕ್ಕು [5]ಕಳ್ಳರಿಂ ||
ಕದನದೊಳಿಱೆವರರಸುಗಳ್ || ೩೨ ||

ಕಂ|| ಜಾಣಿಂ ಶತಭಿಷೆ ನಾಲ್ಕುಂ |
ದ್ರೋಣಂ ಕಱೆದಂದು ಧಾನ್ಯಮರ್ಘಂ ಶುಭದಂ ||
ಮಾಣದೆ ಪೆರ್ಚುಗುಮರಸರ್ |
ಕ್ಷೋಣೀತಳಮಂ ಸವಿಸ್ತರಂ ಪಾಲಿಸುಗುಂ || ೩೩ ||

ಪದಿನಯ್ದುಂ ದ್ರೋಣಮನತಿ |
ಮುದದಿಂ ಪೂರ್ವಭಾದ್ರೆ ಕಱೆಯಲ್ ದೇಶ ||
ಕ್ಕೊದವಿರ್ದಟಲುಂ [6]ಪಿರಿದ |
ಪ್ಪುದು ಪೆರ್ಚಿಂ ಚೋರಬಾಧೆಯುಂ ಪಿರಿದಕ್ಕುಂ || ೩೪ ||

ಉತ್ತರ ಭಾದ್ರೆಯ ಮೞೆ ಯಿ |
ರ್ಪತ್ತಯ್ದು ದ್ರೋಣಮಾಗೆ ಭೂಭುಜರಿಱೆವರ್ ||
ಭತ್ತಂ ಕಂಡುಗು ಮೋ(ನೋ)ಡುಗು |
ಮೆತ್ತಂ ಪ್ರಜೆ ಪರದುಗೆಯ್ದು ಸುಖದಿಂದಿರ್ಪರ್ || ೩೫ ||

---

1 ೪ ನೀರಹಿಡಿವುದೊಂದು. 2 ಸುಂ ವೃದ್ಧಿಯುಂ, ನು ಮಿಳ್ಳಯಕ್ಕೆ. 3 ವಿಶ್ವಾಸ್ಪದಂದು ಕೊಂಡೆಲ್ಲಂ. 4 ನೆಲ್ಲು ಬೆಳೆಗುಂ ಕೆದರಳೆಗಂ ನಾಡೊಳು ಚೋರರುಗಳು ಭಯಮಕ್ಕುಂ ॥೪೪೩॥ 5 ಖಳರಿಂದಂ ನಾಡೊಳಾರಿ ೦ವರ. 6 ಪಱಾಯಪ್ಪುದ, ಸುಳಿಯುಗಗದೆ.

ಕಂ|| ಅತಿಶಯಮೆನೆ ತೊಳಗುವ ರೇ |
ವತಿಯೊಳ್ ಪದಿನಾಱು ಸಂಖ್ಯೆಗೊಂಡೊಡೆ ದೇಶ ||
ಪ್ರತತಿ ಫಲವಕ್ಕು ಮೆಂದೀ |
ಕ್ಷಿತಿಗೆಲ್ಲಂ ನೆಱೆಯೆ ಪೇೞ್ದನೊಳ್ಪಿನ ಅಟ್ಟಂ || ೩೬ ||

ತುರಗಕ್ಕೆ ನೆಗೞ್ದ ಪಕ್ಷಿಗೆ |
ಪರದರ್ಗರಸಿಂಗೆ ಪಸುಗೆ ಸಸಿಗನಿತರ್ಕ್ಕಂ ||
ಕರಮೊಳ್ಳಿತು ಪತ್ತುವರಂ |
ತುರಗಾಕ್ಷಂ ಕಱೆಯೆ ನೆಱೆಯೆ ಅಟ್ಟವೆಡಂಗಾ || ೩೭ ||

ಭರಣಿ ಪದಿನಯ್ದು ಕಱೆದೊಡೆ |
ಧರೆಯೊಳಗಂತಕನ ಬಾಧೆಯಿಂ ಪ್ರಜೆಯೞಿಗುಂ ||
ಉರಗದ ಕೋೞ್ಮಗದ ಭಯಂ |
ಪಿರಿದಕ್ಕುಂ ಕಡೆಯ ಬೆಳಸು ನೇರ್ಪಡೆ ಬೆಳೆಗುಂ || ೩೮ ||

ಕೃತ್ತಿಗೆ ಪತ್ತುಂ ದ್ರೋಣಮು |
ನೆತ್ತಂ ಕಱೆದಂದು ಕಿರ್ಚಿನಿಂ ಭಯಮಕ್ಕುಂ ||
[1]ಭತ್ತ ಮದೞಿಗುಂ ದ್ವಿಜರ್ಗೆ |
ತ್ಯತ್ತಮು ಮರಸ[2]ಗಳೆ ಮೃಗದ ವೇಂಟೆಯ ಮಾೞ್ಪರ್ || ೩೯ ||

ಪದಿನಯ್ದುಂ ದ್ರೋಣದ ಮೞೆ[3] |
ಯೊದವಿದ ರೋಹಿಣಿಯೆ ಕಱೆಗೆ ಭೂಭುಜರ್ಗಂದ ||
ಭ್ಯುದಯಕರಮಕ್ಕು ಮೊಕ್ಕಲು |
ಮೊದಗುಗು ಮೞೆಯೆಲ್ಲಮೊಳ್ಳಿತಾಗಿಯೆ ಕೊಳ್ಗುಂ || ೪೦ ||

ನೆರೆದಿರ್ಪತ್ತಯ್ದುವರಂ ಮೃಗ |
ಶಿರದೊಳ್ ಕೊಂಡಂದು ಕಣ್ಣ ಬೇನೆಗಳಕ್ಕುಂ ||
ಧರೆ ಬೆಳೆಗುಂ ಮಂತ್ರಿಗೆ ಕೇ |
ಡಿರದಕ್ಕುಂ ಮೇಲೆ ಕೋೞ್ಮಗಂಗಳ ದೆಸೆಯೊಳ್ || ೪೧ ||

*ಮಾಣದೆ [3]ಕೇೞೀರಯ್ದುಂ |
ದ್ರೋಣಮು ನೆಸೆವಾರ್ದ್ರೆ ಕಱೆಯೆ ಪುಟ್ಟುವು [4]ಸಸಿಗಳ್ ||
ಪ್ರಾಣಿಗಣಕಧಿಕ ಭಯಮುಂ |
ಪ್ರಾಣಮನೊಯ್ದಂತಗುರ್ವಿ ಪರ್ವಿರೆ ಮೞೆಗಳ್ || ೪೨ ||

---

1 ಭತ್ತ ಮಿಸು(ಗು)ಗುಂ ದ್ವಿಜರ್ಗೆಉತ್ತಮಾ. 2 ಗಳು ಉಗ್ರದಿಂದಂದಿಗಳಿಪ್ಪರು. 3 ಕೇಳಿದನಯ್ದುಂ.
4 ಸಿಸುಗಳ್, ಸಿಸುಂ ಪ್ರಣಗಳ ಮಿಗೆ ಭಯಮಾಗ್ರಣಮನೊಯಿದಂತೆ ಗೂರ್ವಿಪರ್ವಿಗೆ.

*ಇಲ್ಲಿ ಈ ತ್ರಿಪದಿ ಹೆಚ್ಚಾಗಿ ಒಂದು ಪ್ರತಿಯಲ್ಲಿದೆ—
ಅಷ್ಟದೊಳೀರಯ್ದು ದ್ರೋಣವೆಸೆವಾರಿದ್ರೆ ।
ಮಾಣದೆ ಕರೆಯೆ ಪುಟ್ಟುವ ಸಿಸುಗಳಿಂ ।
ಕ್ಷೋಣಿಯೊಳಯ್ತನೆಯಕ್ಕುಂ ॥

ಕಂ|| ಮಸಗಿ ಪುನರ್ವಸು ವಿರ್ಪ |
ತ್ತೆಸಗುವಿನಂ ಕಱೆಯೆ ಗೋಕುಲಂಗಳ್ ಕಱೆಗುಂ ||
ವಸುಮತಿ ಬೆಳೆಗುಂ ಕಳ್ಳರ್ |
ಪಸರಿಸುಗುಂ ಕುತ್ತಮಕ್ಕು [1]ಮಿಟ್ಟಿದ್ಗಳಕ್ಕುಂ || ೪೩ ||

ಪದಿನಯ್ದು ದ್ರೋಣಮಂ ಪು |
ಷ್ಯದೊಳಂ ಮಱೆ ಕೊಂಡೊಡರಸುಮಕ್ಕಳ್ಗೆಲ್ಲಂ ಕು ||
ತ್ತದ ಬಾಧೆಯುಂ ಸುಭಿಕ್ಷ [2]ಕು |
ಲದಱವು ಮೀಧರೆಯೊಳೆಂದನೊಳ್ಪಿನ ಱಟ್ಟಂ || ೪೪ ||

ಲೇಸೆನಿಸಿದ ಮೂಱುಮನಾ |
ಶ್ಲೇಸೆಯೊಳಂ ಕಱೆಯಲಱಗೆ ನೀರ್ಗಮಂದುಚಿತಂ ||
ಪಾಸಂಡಿಗೆ ಶಿಶುಗಳ್ಗಂ |
ತೋಸದೆ ತಾನಿರ್ಕುಮೆಂದ ನೊಳ್ಪಿನ ಱಟ್ಟಂ || ೪೫ ||

*ಪಿತೃರಿಕ್ಷೆಯೊಳ್ ಕಱೆಯಲಿ |
ರ್ಪತ್ತು ದ್ರೋಣಮನೊಳ್ಪಱೆ ಕೊಳೆ ಬೆಳಸೊಳ್ಪಿತಕ್ಕುಂ ||
ಕ್ಷಿತಿಗೆ ಭಯಮಕ್ಕು ಜನಗಳ್ |
ಪಿತೃಗಳ್ಗಗ್ಗಳದ ಪೂಜೆಯಂ ನೆಱೆ ಮಾಳ್ಪರ್ || ೪೬ ||

ಸತತಂ ಪುರ್ಬೆಯೊಳಂತಿ |
ರ್ಪತಯ್ದು ದ್ರೋಣಂ ಕಱೆಯಲೆ ಪೆಂಡಿರ್ ಶಿಲ್ಪಿಗಳುಂ ||
ಅತಿಶಯ ವಿಲಾಸದಿರ್ಪರ್ |
ಮತಿವಂತರುಮಾಗಿ ಪ್ರಜೆಯೆ ಸಂತಸದಿ(ರ್ಕುಂ)ರ್ಪರ್ || ೪೭ ||

ಉತ್ತರೆ ಯಿರ್ಪತ್ತಯ್ದಾ |
ಗುತ್ತಿರೆ ಶಿಲ್ಪರ್ ಮಡಿವಳರ್ ಸೂಱೆಯರುಂ ||
ಮತ್ತಾ ವಾಣಿಜ ಜನಗಳು |
ಮುತ್ತಮರುಂ ಸುಖದೆ ಬಾಳ್ವರೆಂದಂ ಱಟ್ಟಂ || ೪೮ ||

ಪದಿನಾಱುಂ ದ್ರೋಣಂ ಹ |
ಸ್ತದೊಳೊದವಿರೆ ಧನಧಾನ್ಯ ಬೆಳಗು ಮರಸುಗಳಿಱವರ್ ||
ಪದುಳಂ ಸುಖದೊಸಗೆಯೊಳಂ |
ಮುದಮುಂ ವಿಕ್ರಮಮೆ ಪೆರ್ಚುಗರಸುಕುಲಕ್ಕಂ || ೪೯ ||

---

1 ಮಿಡ್ತೆಗಳ್ಕುಂ, ವಿಳ್ಪಗಳಕ್ಕುಂ. 2 ಕುಲ ಮಱಗು ಮೀಧರೆ.

* ಇವೆರಡೂ ಸೇರಿ ಅಕ್ಕರವೃತ್ತವಿರಬಹುದೇ?—

ಪಿತೃರಿಕ್ಷೆಯೊಳಿರ್ಪತ್ತು ದ್ರೋಣಮಂತೊಳ್ಪಱೆ ಕೊಳೆ ಬೆಳಸೊಳ್ಪಿತಕ್ಕು ನಿದಾನಿಸಿ ನೋಡಲ್ ॥
ಕ್ಷಿತಿಗೆ ಭಯಮಕ್ಕು ಜನಗಳ್ ಪಿತೃಗಳ್ಗಗ್ಗಳದ ಪೂಜೆಯಂ ನೆಱೆ ಮಾಳ್ಪರ್ ॥
ಸತತಂ ಪುರ್ಬೆಯೊಳಿರ್ಪತ್ತಯ್ದುಂ ದ್ರೋಣಂ ಕಱೆಯಲ್ ಪೆಂಡಿರುಂ ಶಿಲ್ಪಿಗಳುಂ ॥
ಅತಿವಿಲಾಸದೊಳಗಿರ್ಪರ್ ಮತಿವಂತರದಾಗಿ ಪ್ರಜೆಯು ಸಂತಸದಿರ್ಪರ್ ॥ ೩೦೯ ॥

ಕಂ|| ಚಿತ್ತೆ ಪದಿನಾಱು ಕಱಿದೊಡೆ |
ಬಿತ್ತುಗೆ 1ವಣಿದಾಣವಾದುದೆಲ್ಲಂ ಬೆಳೆಗುಂ ||
ಪತ್ತಿದ ಗಾಳಿಯು 2ಕಿರ್ಚಿಂ |
ವತ್ತಂ ಭಯಮಕ್ಕುಮೆಂದನೊಳ್ಪಿನ ಅಟ್ಟಂ || ೫೦ ||

ಜಾಣಿಂ ಸ್ವಾತಿಯ ನಾಲ್ಕುಂ |
ದ್ರೋಣದಿನರಸಿಂಗುಚಿತಧಾನ್ಯಂ ಬೆಳೆಗುಂ ||
ವಾಣಿಜವರ್ಗಕೆ ಶುಭದಂ |
ಕ್ಷೋಣೀಶರ್ ಪ್ರಜೆಗೆ ಕರಮೆ ಬೆಟ್ಟಿದರಪ್ಪರ್ || ೫೧ ||

*ಎತ್ತಂ ವಿಶಾಖೆ ತಾನಿ |
ರ್ಪತ್ತಯ್ದುಂ ದ್ರೋಣಮಯ್ದೆ ಕಱಿಯಲ್ ಕರ್ವಂ ||
ಕೆತ್ತೋಡುಗು ನೆಗಲ್ದಾ ಭೂ |
ಪೋತ್ತಮರ್‌ಂ ದಾನಧರ್ಮಸನ್ನುತರಪ್ಪರ್ || ೫೨ ||

ತ್ರಿಪದಿ|| ಅನುರಾಧೆ ಪದಿನಾಲ್ಕು ಮೆನಿಸುವ ದ್ರೋಣದೊಳ್ |
ಜನಕೆ ಸಂತಸಮೆ ಬೆಳಸುಂಟು ಭೂಪಾಲರ್ |
ಜನಪಾಲರಕ್ಕು ಶುಭಮಕ್ಕುಂ || ೫೩ ||

ವರಜ್ಯೇಷ್ಠೆಯ ಪದಿನಯ್ದುಂ(ನಾಱುಂ) ಧರೆಗೆ ತಾಂ |
ಕಱಿಯೆ ಕಳ್ಳರ್ ಪೆರ್ಚುವರ್ ಬೆಳಸು ಬೆಳೆಗುಂ ಸಾವಿನ ಭಯಂ |
ಪಿರಿದಕ್ಕುಂ ಭುವನವಳಯದೊಳ್ || ೫೪ ||

ಮೂಲವುಂ ಪದಿನಾಲ್ಕು ಲೀಲೆಯಿಂ ಕಱಿಯೆ ಭೂ |
ಪಾಲರುಂ ಬ(ಬೆ)ಳ್ಳರುಂ ದೊಡ್ಡವರಪ್ಪರ್ ಪಿರಿದುಂ |
ಮೇಲಪ್ಪ ಜನಕ್ಕೆ ಭಯಮಕ್ಕುಂ || ೫೫ ||†

(ಇಂತು ಮುಗಿಲ್ಗಳ ದ್ರೋಣಸಂಖ್ಯೆ)

---

1 ಕುಟುದೊಣೆದು ಮಾದುದೆಲ್ಲಂ, ಕುಣಿಕುಣಿದು ನಾಡಿಗೆಲ್ಲಂ. 2 ದೆತ್ತಂ ಮನೆ ಬೀವುದೆಂದ.

*ಒಂದು ಪ್ರತಿಯಲ್ಲಿ ಮುಂದಣ ಪದ್ಯಗಳಿಗೆ ಬೇರೆ ಈ ಪಾಠವಿದೆ—

ವಿಶಾಖೆ ತಾನಿರ್ಪತಯ್ದುಂ । ಎಸೆವಾ ದ್ರೋಣಮನೆ(ನು) ಕಱಿಯೆ ಕಳ್ಳರ್ ಪೆರ್ಚುಗುಂ ॥
ಎಸೆವಾ ನಾಡರಸುಗಳುಂ । ವಸುಧೆಯೊಳಂ ದಾನಧರ್ಮ ಕೋವಿದರಪ್ಪರ್ ॥ ೧೧೪ ॥
ಅನುರಾಧೆ ನಾಲ್ಕುಮೆನಿಸುವ । ದ್ರೋಣದೊಳಂ ಬೆಳೆ ಪಿರಿದು ಪ್ರಜೆಗೆ ಸಂತಸಮಕ್ಕುಂ ॥
ಜನನಾಥರಧಿಕಕೃಪೆಯಿಂ । ಮನುಜರ ಪಾಲಿಸಿ ಸಮಸ್ತ ಸುಖಮುಂ ಪಡೆವರ್ ॥ ೧೧೫ ॥
ವರಜ್ಯೇಷ್ಠೆಯ ಪದಿನಯ್ದುಂ । ಧರೆಗಂ ತಾಂ ಕಱಿಯೆ ಕಳ್ಳರುಂ ಪೆರ್ಚಿದಪರ್ ॥
ಧರೆ ಬೆಳೆವುದು ಸಾವಿನ ಭಯ । ಪಿರಿದಕ್ಕುಂ ಮನುಜರ್ಗೆಂದ ನೊಳ್ಪಿನ ಅಟ್ಟಂ ॥ ೧೧೬ ॥
ಮೂಲದ ಮಟಿ ಪದಿನಾಲ್ಕುಂ । ಲೀಲೆಯೊಳಂ ಕಱಿಯೆ ಖಳಂನರಸುಗಳಿಂದಂ ॥
ಭೂಲೋಕವೆಲ್ಲ ಕಿಡುಗುಂ । ಮೇಲಪ್ಪಾ ಜನಕ ಮುಗ್ರಭಯಮಂತಕ್ಕುಂ ॥ ೧೧೭ ॥

†ಇಲ್ಲಿಂದ ಒಂದು ಪ್ರತಿಯಲ್ಲಿ ಗ್ರಂಥಪಾತವಿದೆ (ಮೂ. ಪ್ರ. ೧೭೦ ರಿಂದ ೧೭೭ ಪದ್ಯದವರೆಗೆ).

## ೫. ಮುಗಿಲ್ಗಳ ಗರ್ಭಾಧಾನಂ

ವ|| ಇನ್ನು ಗರ್ಭಾಧಾನಮಂ (ದೇಶವೃಷ್ಟಿಯುಂ) ಪೇೞ್ವೆಂ—

ಕಂ|| ಶುಭದಿನ ಶುಭಲಗ್ನದೊಳತಿ |
ಶುಭಗ್ರಹೋದಯದೆ ಶುಭನವಾಂಶಕದಿಂದಂ ||
ಶುಭಚಂದ್ರನಾಗೆ ಮೞೆಗಳ್ |
ರಭಸದೆ ಕೊಂಡಂದು ವಸುಧೆಗುತ್ಸವಮಕ್ಕುಂ || ೫೬

ತ್ರಿಪದಿ|| ಅರಸಿಂಗೆ ವೊಕ್ಕಲಿಂಗೆ ಪರದಂಗೆ ಪಾರ್ವಂಗೆ |
ಸುರಪಾದಿ ದೆಸೆಯ ಮೞೆಗಳ್ ಕೊಂಡೊಡೆ |
ಕರವೊಳ್ಳಿತೆಂದ ನಯಬಂಧು || ೫೭ |

ಬಿಸುರುಹ ಮಿತ್ರಂ ಮೂಲ |
ಪ್ರಸರದೊಳಂ ನಿಂದೊಡದುವೆ ಮೊದಲಾಗೆ ಘನ ||
ಪ್ರಸರಕ್ಕೆ ಗರ್ಭಮಕ್ಕುಂ |
ಪುಸಿಯಲ್ಲ ವರಾಹಮಿಹರ ಗಾರ್ಗ್ಯರ ಮತದೊಳ್ || ೫೮

ಅಕ್ಕರಂ|| ಮೂಲಕ್ಕಾದಿತ್ಯಂ ಬಂದುದು ಮೊದಲಾಗೆ ದಿವಸಮೇೞಱೊಳ್ ಬಳಸಿ (ತೋಱೆ) |
ಮೇಲೆನಿಪ ಪದಿಮೂಱು ದೆವಸದೊಳ್ ಬಿಸಿಲುದೋಱೆ ಪದಿನೆಂಟಱೊಳ್ ಮಿಂಚೆ |
ನಾಲ್ವತ್ತೇೞಱೊಳ್ ಸಲೆ ಮೞೆ ಕೊಳೆ ಗರ್ಭಮುಂಟೆಂಗೆ ನಯಬಂಧು |
ಮೂಲದಿಂ ಪದಿಮೂಱುದೆವಸದೊಳಂ ಪೋಲೆ ಪಗಲನಿರುಳುಮಂ ಮೆಚ್ಚಲ್ || ೫೯

ತ್ರಿಪದಿ|| ಮೂಲದ ಮೊದಲೊಳ್ ಬೆಳಗುಂ ಪತ್ತಿದ ಕಿರ್ಚುಂ |
ಗಾಳಿಯುಂ ಕಿರ್ಚುಮದೆತ್ತಂ ಭಯಮಕ್ಕುಮೆಂದ |
(ನೋೞಿಯೊ)ಳೊಳ್ಪಿನ ಱಟ್ಟ ? || ೬೦

ವ|| ಮೂಲದ ಮೊದಲ್ಗೊಂಡು ನೋಡುವುದು—

ಅಕ್ಕರಂ|| ತೊಂಬತ್ತೇೞಱೊಳ್ ಪರಿವೇಷಮಾದೊಡಂ ನೂಱಮೂವತ್ತೇೞಱೊಳ್ ಬಿಸಿಲ್ಗಂಡೊಡಂ
ನಂಬು ನೂಱೆಂಟುದೆವಸದೊಳ್ ಮಿಂಚಾದೊಡಂ ನೂಱನಾಲ್ವತ್ತೇೞುಂದಿನದೊಳೆತ್ತ
ಮುಂಬೆ ನಿಲೆ ಮುಗಿಲ್ ಕರ್ಗಿ ಕೊಂಡಿರ್ಪೊಡಂ ಮೇಘಸಂತತಿಗಾದ ಗರ್ಭಮೆಲ್ಲಂ |
ತುಂಬಲ್ ಮಾತೇನೊ ಗಾಳಿಸಲೆಂದಱಿಗೆ [1]ಱಟ್ಟಕಂದರ್ಪನ ಸೂತ್ರೇಷ್ಟದಿಂ || ೬೧

ಕಂ|| ಮೂಲಂ ಮೊದಲಾಗಿರೆ ಸ |
ಲ್ಲೀಲೆಯ ಪದಿಮೂಱುವರೆಗೆ ನೆಲಸಿದ ಗರ್ಭಂ ||
ಸಾಲೆ ಮೃಗಶೀರ್ಷದರ್ಧದೆ |
ಮೂಲಂ ಬರಮೆಯ್ದೆ ಕಱೆಗುಮಂತರಿಕ್ಷಗಳಿಂ || ೬೨

---

1 ಱಟ್ಟವೆಡಂಗನ ಪೇೞ್ದ ಮಾರ್ಗದಿಂ.

* ಒಂದು ಪ್ರತಿಯಲ್ಲಿ ಇಲ್ಲಿ "ಗರ್ಭಾಧಾನಮಂ ಪೇೞ್ವೆಂ" ಎಂದಿದೆ.

ಕಂ|| ಧನುಮಕರಂಗಳೊಳಿನನಿರೆ |
ಘನಗರ್ಜನೆ ಗಾಳಿ ಮಿಂಚು ಸುರಧನು ಬಡಪಂ ||
ಘನಮಾಗಿ ಮೇಘಮೊಡ್ಡಿದೊ |
ಡನಿತಱೊಳಂ ಗರ್ಭನಿಂದುದೆಂದಱ ಅಟ್ವಾ || ೬೩ ||

ವರ[1]ಕುಂಭಮೀನ(ದಿ)ದೊಳಿನನಿರೆ |
ಪರಿವೇಷಂ ಗಾಳಿ ಮಿಂಚು ಸುತ್ತಂ ಮುಗಿಲೊ ||
ಡ್ಡಿರೆ ದೊರೆಕೊಂಡಱವುದ[2]ದಂ |
ಭರದಿಂ ಮುಗಿಲ್ಗರ್ಭನಿಂದುದೆಂದಂ ಅಟ್ವಂ || ೬೪ ||

ಮೇಷ ವೃಷದೊಳಿನನಿರೆ ಪರಿ |
ವೇಷಂ ಮೞೆ ಮೊೞಗು ಮಿಂಚು ಸುರಧನು ಮೇಘಂ ||
ಶೋಷಿತಗರ್ಭದ ಯಿರವಂ |
ಲೇಸೆಂದುರೆ ಪೇೞ್ದ ಅಟ್ವ ತಾನಱಿದಿಟ್ವಂ || ೬೫ ||

ವರಮಿಥುನಕರ್ಕಟಂಗಳೊ |
ಳರವಿಂದಪ್ರಿಯನಿರಲ್ಕೆ ಪೆರ್ಮೞೆ ವಿಶ್ವಂ ||
[3]ಭರೆಗಂ ಕಱೆಯಲ್ ನಿರಂ |
ತರದಿಂ ಮೞೆಯಕ್ಕುಮೆಂದನೊಲ್ಪಿನ ಅಟ್ವಂ || ೬೬ ||

ಸಿಂಗದೊಳಂ ಕನ್ನೆಯೊಳಂ |
ಸಂಗತ ರವಿ ನೆಲಸೆ ನೊ(ಬೆ)ೞ್ಪ ಬೆಳಸುಗಳೆಲ್ಲಂ ||
ಪಿಂಗದೆ ಬೆಳೆಗುಂ ಜಗದ ಜ |
ನಂ[4]ಗಳ್ಗಂ ಪಿರಿದುಮೊಂದು ಸಂತಸಮಕ್ಕುಂ || ೬೭ ||

ತೊಲೆ ವೃಶ್ಚಿಕಂಗಳೊಳ್ ರವಿ |
[5]ನೆಲಸಿರ್ಪೊಡೆ ಮೇಘಮೊಡ್ಡಿ ಮೞೆಗಳ್ ಕೊಳ್ಗುಂ ||
ಚಲಿಸದೆ ಬೆಳೆಗುಂ ರಾಶಿಯು |
ನೆಲಕೆಲ್ಲಂ ನೆಱೆಯದಂತೆ ಜಿನನಗರಪತೀ || ೬೮ ||

ಧನು ಮೊದಲಾಗಿರೆ ವೃಶ್ಚಿಕ |
ಕಿನನೊಸೆದಿಯ್ದುವಿನ ಮೞೆಗೆ ದಶಧಾತುಗಳು ||
ಳ್ವನಿತುಂ [6]ಕಾರ್ ನಡುಕಡೆ ಯೆಂ |
ಬಿನಿತುಂ ತಪ್ಪಿಲ್ಲದೊಳ್ಪಿತಾಗಿರೆ ಬೆಳೆಗುಂ || ೬೯ ||

(ಇಂತು ಮುಗಿಲ್ಗಳ ಗರ್ಭಾಧಾನಂ)

---

1 ಕುಂಭ ಮೀನ ದಿನನಿರೆ. 2 ದು| ತ್ತರದಿಂದಂ ಮುಗಿಲು ಗರ್ಭನಿಂದುದುಯೆಂದು. 3 ಭರೆಗೆ ಸಲೆ ಕಱೆಯೆ ನಿರಂತರ ಬೆಳಗುಮೆಂದನೊ. 4 ಗಳ್ ತಾಂ ವೇಶನದಿಂದ ಕಿಡುವರ್ ಅಟ್ವಾ. 5 ನೆಲಸೆ ಮಹಾವರ್ಷಮಕ್ಕುಮಾದೊಡೆ ಕಡೆ ಸಂಚಳಿಸದೆ ಬೆಳೆಗುಂ. 6 ನವುಂಸ ಮಾಸದೊಳ್ ಗಾಳಿ ತಗುಳ್ಗ ವೊಳ್ಮೞೆಯಕ್ಕುಂ.

### ೬. ಮೞೆಕೊಳ್ವ ನಿಮಿತ್ತಂ

ವ|| ಈ ಕ್ರಮದಿಂ ದಶಧಾತುಗಳ್ ತೋಱೆ ಗರ್ಭಂ ನಿಂದಂದು ಬೞಿಯಂ—

ಕಂ|| ಗೞಿಯಿಸಿದ ಗರ್ಭಮಂ ಮಂಗಿ |
ಲೊಳಕೊಂಡಿರ್ದಂದು ನೂಱತೊಂಬ[1]ತ್ತಾದೊಂ ||
ದಳವಿಯ ದಿವಸಕೆ ಮೞೆ ಮೊ |
ಕ್ಕಳಮಕ್ಕುಂ ಭೂಮಿವಲಯದೊಳ್ ನಯಬಂಧೂ || ೨೦ ||

ಜಾಱಲ್ಲದೆ ಕೇಳ್ ಗರ್ಭಕೆ |
ತೋಱಿದ ದಿನಮಾದಿಯಾಗಿಯಱುದಿಂಗಳಮೇ ||
ಲಾಱುದಿನಮಾಗೆಯುಂ ಮೞೆ |
ಕೇಱ ಜಗಕ್ಕೆಯ್ದೆ ಕಱೆಗುಮಿದುವೊಂದುಮತಂ || ೨೧ ||

ಮತ್ತೊಂದುಮತಂ [2]ನೂಱ |
ಯ್ವತ್ತೇೞು ದಿನಂಗಳಂದು ಪೆರ್ಮೞೆ ಜಗದೊಳ್ ||
ಸುತ್ತಲುಮಕ್ಕುಂ ಗರ್ಭೋ |
ತ್ಪತ್ತಿಯೆ ಮೊದಲಾಗೆ ನೆಗಳ್ದ [3]ಱಟ್ಟನ ಮತದಿಂ || ೨೨ ||

ತ್ರಿಪದಿ|| ನೆಱೆ ನೂಱುನಾಲ್ವತ್ತೇೞಱಕೆಯ ನೆನಸು (ದೆವಸದ) |
ತ್ತಱ(ಗೆ)ದು ಪೆರ್ಮೞೆಗಳೞವಲ್ಲದಿರೆ ಕೊಳ್ಗು |
ಮೞೆ ಗರ್ಭಮಾದ ದಿವಸಕ್ಕೆ || ೨೩ ||

ಕಂ|| ಮಿಂಚುಂ ಗಾಳಿಯು (ಮಾ)ಮೊೞ |
ಗಂಚಿಕಮಲ್ಲದೆ ಕಡಂಗಿ ವೈಶಾಖದೊಳಂ ||
ಮುಂಚೆ ಮೞೆ ಕಱೆಯೆ ಗರ್ಭಂ |
ಸಂಚಿತಮಾದಾಱು ತಿಂಗಳೊಳ್ ಮೞೆಯಕ್ಕುಂ || ೨೪ ||

(ಇಂತು ಮೞೆಕೊಳ್ವ ನಿಮಿತ್ತಂ)

### ೭. ಮಾರ್ಗಶಿರಮಾಸದ ವೃಷ್ಟಿ ಸ್ವರೂಪಂ

ವ|| ಅಂತು ಗರ್ಭಮಾದ ಪರಿಯಂ (ಮೞೆ ಕೊಳ್ವುದಂ) ಪೇೞ್ದಂ, ಇನ್ನು ಮಾರ್ಗಶಿರ ಮಾಸದ ಫಲಮಂ ಪೇೞ್ವಂ—

ಕಂ|| ನೆನೆ ಮಾರ್ಗಶಿರದೆ ತುಂತು |
ರ್ವನಿ ಕೊಳೆಯುಂ ಪುಷ್ಯಮಾಸದೊಳ್ ಗಾಳಿ ತಗು ||
ಳ್ದನುನಯದಿಂ ಬೀಸೆಯು ಮು |
ನ್ನಿನ ತೆಱದಿಂ ಕೊಳ್ಗುಮಿಳೆಯೊಳೊಳ್ಪಿತು ಮೞೆಗಳ್ || ೨೫ ||

1 ತೊಂಬತುಂ ಜೊಂಡ. 2 ನೂಂಪ್ಪತ್ತೇೞು. 3 ಜಿನನಗರಪತೀ.

ತ್ರಿವಿಧಿ|| ಪರಮಾರ್ಥಂ ಕೇಳ್ ಮಾರ್ಗಶಿರದ ಪಾಡಿವದಂದು |
ಹರಿಣಾಂಕ(ನ) ಲೇಖೆಯನೆ ಮುಗಿಲ್ ಕವಿದೊಡೆ |
ಧರಣಿಗೆ ಕೂಡೆ ಮಟೆ ಕೊಳ್ಗುಂ || ೭೬ ||

ಚಂ|| ಘನತತಿ ಮಾರ್ಗಶೀರಃಷದ ಕಾಳದ ಪಾಡಿವದಿಂದುಲೇಖೆಯಂ |
ಘನತರವಾಗಿ ಮುಚ್ಚಿದೊಡೆ ಪೆರ್ಮಟೆ ಪಂಚಮಿಗೆಯ್ದೆ ಮುಂಚಿ ಬೇ ||
ಟ್ಟನಿತು ಜಳಂ ತ್ರಿಭಾಗೆ ಮಿಗಿಲಾಗಿಯೆ ಮುಂಚಿದೊಡಲ್ಲಿ ವೃಷ್ಟಿ ಚಂ |
ದ್ರನ ಚತುರಂಗದೊ(ಕೊ)ಳ್ ನೆಲಸಿ ನಿಂದತಿ(ದಿ)ಶಾಳಿಯು ವೃಷ್ಟಿ ಅಟ್ಟುಗಾ|| ೭೭ ||

ಕಂ|| ಮೊಟಗುಂ ಮಿಂಚುಂ ಮುಗಿಲುಂ |
ಘಟಿಲನೆ ಕೊಳೆ ಮಾರ್ಗಶಿರದ ಪುಣ್ಣಿಮೆಯಂದೊ ||
ಡ್ಡಟಿಯದಿರೆ ನೋಡಿ ಪೇಟ್ ಪೆ|
[1]ರ್ಮಟೆ ಯೆಲ್ಲಂ ತಪ್ಪದಕ್ಕುಮೆಂದಂ ಅಟ್ಟಂ || ೭೮ ||

ಉ|| ಖ್ಯಾತಿಯ ಮಾರ್ಗಶೀರುಷದ ಸಂದಮವಾಸೆಯೊಳಕ್ಕೆ ಮೇಣ್ ಮಘಾ |
ಸ್ವಾತಿಯೊಳಕ್ಕೆ ರುದ್ರಘಣಿರಿಕ್ಷೆಯೊಳಕ್ಕೆ [2]ಮುಸುರ್ವು ವೃಷ್ಟಿಯುಂ ||
ಶೀತಮಳುಂಬಮಾಗೆ ಬಡಪಂ ಕೊಳೆ [3]ಬಿತ್ತನೆಯಪ್ಪ ಕಾಲದೊಳ್ |
ಭೂತಳಕೆಲ್ಲಿಯುಂ ಕಱಿಗು ಪೆರ್ಮಟೆಯುಂ ಬೆಳಸುಂ ನಿರಂತರಂ || ೭೯ ||

ಕಂ|| ಸಂದಿರ್ದ ಮಾರ್ಗಶಿರದಂ |
ದೊಂದಿದ ಪುಣ್ಣಿಮೆಯದಿವಸ ರವಿಶಶಿ ಮುಗಿಲೊಳ್ ||
ಬಂದುದಯಿಸೆ ಕಾರ್ಕಡೆಯಾ |
ಮುಂದಣ ಕಾಲಕ್ಕೆ [4]ಮಟೆಗಳೊಳ್ಪನೆ ಪೇಟ್ಗುಂ || ೮೦ ||

(ಇಂತು ಮಾರ್ಗಶಿರ ಮಾಸದ ಲಕ್ಷಣ ಫಲಂ)

೨. ಪುಷ್ಯಮಾಸದ ವೃಷ್ಟಿ ಸ್ವರೂಪಂ

ವ|| ಇನ್ನು ಪುಷ್ಯಮಾಸದ ಫಲಮಂ ಪೇಟ್ವೆಂ—

ವರಪುಷ್ಯದ [5]ರೋಹಿಣಿಯೊಳ್ |
ಪರಿವೇಷಂ ಮಂಜು ತೋಱಲಾಷಾಢದೊಳು(ಳಂ) ||
ವರ್(ಧ)ರೆಗೆ(ಗಂ) ಮಟೆಕೊಳ್ವುದು ಪುಸಿ |
ವರಶೂಲಂ [6]ಪೇಟ್ದ ಮತಮದೇಂ ತಪ್ಪುಗುಮೇ || ೮೧ ||

ಆ ಪುಷ್ಯದ ಪೌರ್ಣಮಿಯೊಳ್ |
ವ್ಯಾಪಿಸಿ ಮಂಜೊಗೆಯೆ (ಜಾಗೆ) ಮುನ್ನಿರುಳ್ ನಡುವಿರುಳೊಳ್ ||
ಪೋಪಿರುಳೊಳ್ ಕಾರ್ನಡು (ತನ್ನಾಡು) ಕಡೆಯಿಂ |
ಯಾಪರಿವಿಡಿಗೆಯ್ಯೆ ಬೆಳೆಗು ಮೊಳ್ಪಿನ ಅಟ್ಟಾ || ೮೨ ||

---

1 ರ್ಮಟೆಯುಂ ಮುಂದ(ಕ್ಕೆ) ತಪ್ಪದೆಂದಲ್ಲೆಡೆಯೊಳ್, ಮುಂದೆ ತಪ್ಪಿಲ್ಲದೆಂದಿಳೆಗೆಲ್ಲ. 2 ಮುಸುರ್ವಗೆ (ಗ)ಟ್ಟಿಯುಂ. 3 ಬಿತ್ತಮಪ್ಪ ಕಾಲದೊಳ್. 4 ಮಳೆಗಳೊಳು ಮಟೆಯಕ್ಕುಂ, ಮಳೆಗಳುಂಟೆನೆ ಪೇಟ್ಗುಂ. 5 ಪುಣ್ಣಿಮೆಯೊಳ್. 6 ಪೇಟ್ವನೆಂದೊಡೇಂ.

ಕಂ|| ಒದವಿದ ಪುಷ್ಯದ ಪೂರ್ಣಿಮೆ |
ಮೊದಲಾಗಂತೇಟುದಿವಸಮುಂ ಕಾಳಿಕೆಯೊಳ್ ||
ಪುದಿಯದೆ ದಶಧಾತುಗಳೊ |
ಳ್ಪೊದವಿರೆ ಮೇಗಣ್ಗೆ ಮೞೆಗಳಕ್ಕುಂ (ಬೆಳೆಗುಂ) ಜಟ್ಟಾ || ೮೩ ||

*ಭೂನುತ ಪುಷ್ಯದ ಪೂರ್ಣದೊ |
ಳಾ ನವಧಾತುಗಳುಮಿಂದ್ರಧನುವುಂ ನಯದಿಂ ||
ತಾನಾಗೆ ಮೇಘವರ್ಷಮ |
ನೂನಂ ಪ್ರಜೆಗಂ ನಿರಂತರಂ ಸಂತೋಷಂ || ೮೪ ||

ತ್ರಿವಿಧಿ|| ಕೇಳ ಪುಷ್ಯದೊಳಾದ ಕಾಳ[1]ದಷ್ಟಮಿಯೊ(ಳಂ)ಳ್ |
ಗಾಳಿ(ಯುಂ) [2]ಮಿಂಚುಂ ಮೊೞಗುಂ ಮಂಜುಂ ಮಿಗೆ |
ಕಾಲ್[3]ವೃಷ್ಟಿಯೊಳೆ ಬೆಳಸಕ್ಕುಂ || ೮೫ ||

ಶಾ|| ಮಾತೇಂ ಪುಷ್ಯದ ಕಾಳದಷ್ಟಮಿಯೊಳಾದಾ ಸ್ವಾತಿಯೊಂದಕ್ಕೆ ವಿ |
ಖ್ಯಾತಂ ಕೇಳಮವಾಸೆಯೊಳ್ ಶತಭಿಷಂ ತಾಂ ಕೂಡಿದಂದಕ್ಕೆ ಜೇ ||
ಮೂತವ್ರಾತ ಮೊಡರ್ಚೆ ಮಂಜು ಕವಿಯಲ್ ಮೇಗಣ್ಗೆ ತತ್ಸಸ್ಯ ಸಂ |
ಘಾತಕ್ಕಾಸಡಿಯಂದು ಮುಂಚಿ ಮೞೆಗಳ್ ಕೊಳ್ಗುಂ ವಿಶಿಷ್ಟಪ್ರಿಯಾ || ೮೬ ||

(ಇಂತು ಪುಷ್ಯಮಾಸದ ಫಲಂ)

೯. ಮಾಘಮಾಸದ ವೃಷ್ಟಿ ಸ್ವರೂಪಂ

ವ|| ಇನ್ನು ಮಾಘ ಮಾಸದ ಫಲಮುಂ ಪೇೞ್ವೆಂ—

ತ್ರಿವಿಧಿ|| ಮಾಘದ ಪುಣ್ಣಮೆಯೊಳಮೋಘದಿಂ ಮೞೆ (ಕೂಡೆ) |
ಮೇಘಂಗಳ್ ಪನಿತಡರೆ ಮೇಘಂ ಕುಂಭ(ದ) |
ಮೇಘಮೆಂಬ ವೊಲೆ ಮೞೆ ಕೊಳ್ಗುಂ || ೮೭ ||

ಕೇಳ ಮಾಘದೊಳಾದ ಕಾಳ[4]ಸಪ್ತಮಿಯೊಳಂ |
ಪ್ರಾಳೇಯ ರಶ್ಮಿ ಕವಿಯೆ ಧಾತುಗಳಾ[5]ದೊ |
ಡಾಳಾಪಮೇನೊ ಮೞೆಯಕ್ಕುಂ || ೮೮ ||

ಕಂ|| ವರಮಾಘ ಬಹುಳ ಸಪ್ತಮಿ |
ಯಿರುಳೊಳ್ ಪರಿವೇಷಮಿಂದುಗಾದೊಡೆ ಸಲೆ ಭೋ ||
ರ್ಗರೆದು ಮೞೆಕೊಳ್ಗು ಮತ್ತಾ |
ದರದಿಂ ಶ್ರಾವಣದ ಶುದ್ಧಸಪ್ತಮಿಯಿರುಳೊಳ್ || ೮೯ ||

---

1 ದಸಪ್ತಮಿ. 2 ಮಿಂಚಭ್ರಂ. 3 ದೊಳತಿವೃಷ್ಟಿ. 4 ಸ್ವಾತಿಯೊಳ್. 5 ದೊಡಾ ಪವನಂ ಮೞೆಯ ತಾಂ ಕೞೆಗುಂ (ಪ್ರಾಸದೋಷ).

*ಒಂದು ಪ್ರತಿಯಲ್ಲಿ ಇಲ್ಲಿಂದ "ಬಾರಸೆವಾಯು ರಿಕ್ಷೆಯುಂ"(೯೦)-ಇಲ್ಲಿಯವರೆಗೆ ಗ್ರಂಥಪಾತ—ಪುತ್ರಿಕೆಯಲ್ಲಿ ೬೭ನೆಯ ಪತ್ರ (ಓಲೆ) ಯಿಲ್ಲ ಎಂದು ಬರೆದಿದೆ.

ಚಂ|| ಶತಭಿಷೆ ಮಾಘಮಾಸದಮವಾಸೆಯೊಳುತ್ತರಷಾಢದಂದು ರೇ |
ವತಿಯುಗ ಭಾದ್ರಪಾ(ಪ)ದದೆರಡಷ್ಟಮಿ *ಬಾರಸೆ ವಾಯುರಿಕ್ಷೆಯುಂ ||
ದತಿಶಯವಾಗಿ ಗಾಳಿ ಬಿಡೆ ಬೀಸಿದೊಡಾಸಡಿಯುಂದು ಮತ್ತೆ ಭೂ |
ನುತಮೆನೆ ನಾಡೆ ಪೆರ್ಮಳೆಗಳಪ್ಪುವು ತಪ್ಪದು ಅಟ್ಟನಿಪ್ಪದಿಂ || ೯೦ ||

ಕಂ|| ಲೇಸಪ್ಪ ಮಾಘ ಪಾಲ್ಗುಣ |
ಮಾಸದೊಳಾಶ್ಲೇಷೆ ಜ್ಯೇಷ್ಠೆ ಮೂಲಾರ್ದ್ರೆಯೊಳಾ ||
ದಾಶ್ವಿನಿಯಿಂದಾ ಪೇಳ್ದಾ |
ಮಾಸಂಗಳೊಳಳವಿಗಳಿಯೆ ಮಳೆಯಿ(ಯುಂ) ಬೆಳಸುಂ || ೯೧ ||

(ಇಂತು ಮಾಘಮಾಸದ ಫಲಂ)

೪. ಪಾಲ್ಗುಣಮಾಸದ ವೃಷ್ಟಿ ಸ್ವರೂಪಂ

ವ|| ಇನ್ನು ಪಾಲ್ಗುಣ ಮಾಸದ ಫಲಮಂ ಪೇಳ್ವೆ—

ಕಂ|| ಒದವಿದ ಪಾಲ್ಗುಣ ಸಿತಪ |
ಕ್ಷದ ರೋಹಿಣಿಯೊಳ್ ಶಶಾಂಕನಂ ಪರಿವೇಷಂ ||
ಪುದಿದೊಡೆ ಮೇಗಣ ಮಳೆ ಕೊ |
ಳ್ಪದೆ ಕಿಡುಗುಂ ಜನಮುಮಧಿಕ (ವ್ಯಾಧಿಯೊ)ರೋಗದೊಳಳಿಗುಂ || ೯೨ ||

ಮೇಲೆನಿಸಿದ ಪಾಲ್ಗುಣದೊಳ್ |
ಮೂಲಂ ಮೊದಲಾಗಿ ನೆಱೆಯೆ ಕೃತ್ತಿಗೆವರೆಗಂ ||
ಸಾಲೆ ದಶಧಾತು ತೋಱಿದೊ |
ಡೀಲೋ[1]ಕ ಮನೇಕಧಾನ್ಯಚಯು(ಸಮು)ಮಂ ಬೆಳೆಗುಂ || ೯೩ ||

†ಸ್ವಾತಿ ಮಘೆ ಪೂರ್ವೆಯುತ್ತರೆ |
ಽ(ನಿ)ರ್ಋತಿಯು ಪಾಲ್ಗುಣದೊಳೊಂದಿ ಬರೆ ತದ್ದಿವಸಂ ||
ಧಾತುಗಳನಿತುಂ ತೋಱೆ ಮ |
ಹೀತಳದೊಳ್ ಮಳೆಯುಮಕ್ಕು ಮರ್ಘಮುಮಕ್ಕುಂ || ೯೪ ||

ಮಾತೇಂ ಫಾಲ್ಗುಣದಪರ |
ಸ್ವಾತಿಯೊಳಂ ಮೃಗಶಿರೆಯೊಳೊಗೆ(ಸೆ)ದು ನೆಲಸಿರೆ ಪತ್ತುಂ ||
ಧಾತುಗಳುಂ ತೋಱಿದೊಡವ |
[2]ನೀತಳದೊಳ್ ಬೆಳೆಯುಮರ್ಘಮುಂ ಪಿರಿದಕ್ಕುಂ || ೯೫ ||

1 ಕವೆ ಮನಕೆ ಬಂದ ಧಾನ್ಯಂ. 2 ಮೆಚ್ಚುವೆಡೆ ಪೆರ್ಮಳೆ ಕೊಳ್ಗುಂ.

† ಈ ಪದ್ಯವು ಎರಡು ಪ್ರತಿಗಳಿಲ್ಲ. ಮತ್ತು ಒಂದು ಪ್ರತಿಯಲ್ಲಿ ಇಲ್ಲಿಂದ ಮುಂದೆ "ಪಾದದೊಳೆ ಚಂದ್ರ" (೩೬೬) ವರೆಗೆ ಗ್ರಂಥಪಾತ – ಪತ್ರಿಕೆಯಲ್ಲಿ ಮೂಲದ 69ನೆಯ ಪತ್ರವಿಲ್ಲವೆಂದು ಬರೆದಿದೆ.

ಕಂ|| ಕುಂದದೆ ಪಾಲ್ಗುಣ ಮಾಸದೊ |
ಳೊಂದಿದ ಪುಣ್ಣಮೆಯಿನತ್ತ ತದಿಗೆವರಂ ಕೇ ||
ಳೊಂದು ಪನಿ [1]ಪನಿತೊಡಂ ಮುಟಿ |
ಮುಂದಣ್ಗೆನಿತಿಲ್ಲದಂತೆ ಪೆರ್ಮುಟಿ ಕೊಳ್ಗುಂ || ೯೬ ||

[2]ಎಸೆದಿರೆ ಫಾಲ್ಗುಣಮಾಸದ(ದೊ) |
ಅ(ಳ)ಸಿತದ ಬಾರಸೆಯ ಚತುರ್ದಶಿಯ ದಿನದೊಳ್ ನಾ ||
ಲ್ದೆಸೆಯುಂ ಮುಸುಕಿ (ದ ಮುಗಿಲಿನೊ) ದೊಡಂ ಎ |
ಣ್ದೆಸೆಯೊಳೆ ಮುಗಿಲಾದೊಡಿಳೆಗಮೊಳ್ಪುಟಿಯಕ್ಕುಂ || ೯೭ ||

(ಇಂತು ಪಾಲ್ಗುಣಮಾಸದ ಫಲಂ)

೫. ಚೈತ್ರಮಾಸದ ಮುಟಿಯ ಸ್ವರೂಪಂ

ವ|| ಇನ್ನು ಚೈತ್ರಮಾಸದ ಫಲಮಂ ಪೇೞ್ವೆಂ—

ಪಿರಿಯಕ್ಕರಂ|| ಎಸೆವ ಚೈತ್ರದೊಳೆ ಮುಗಿಲೊಡ್ಡಿ ತೋ[3]ರ್ಪೊಡಂ ವೈಶಾಖಮಾಸದೊಳ್ ಮೊಟಗು ತೋರ್ಪೊಡಂ |
ಮಸಗಿ ಜ್ಯೇಷ್ಠೆಯೊಳೆ ಪೆ(ನಿ)ಗರ್ಾಳೆ ತೋಱಿಯುಂ ಆಷಾಡದೊಳೆ ತುಂತುರ್ವನಿ ತೋಱಿಯುಂ ||
ವಸುಧೆ ಬಣ್ಣಿಸಲ್ ಶ್ರಾವಣದೊಳ್ ತಪ್ಪದೆ ಮುಟಿ ತೋಱಿಯುಂ ಲೋಕವೆಲ್ಲಂ |
ಮುಸುಱ ಮುಟಿ ಕೊಳ್ಗುಂ ಬೆಳಸೊಳ್ಳಿತಕ್ಕು ಕವಿಗಳಾಭರಣಂ (ಅಟ್ಟಗ) ಪೇೞ್ದಂದದಿಂ || ೯೮ ||

(ಇಂತು ಚೈತ್ರಮಾಸದ ಫಲಂ)

೬. ವೈಶಾಖಮಾಸದ ವೃಷ್ಟಿ ಸ್ವರೂಪಂ

ವ|| ಇನ್ನು ವೈಶಾಖಮಾಸದ ಫಲಮಂ ಪೇೞ್ವೆಂ—

ಕಂ|| ನುತವೈಶಾಖದ ಬಹುಳ |
ಪ್ರತಿಪದಿಯೊಳ್ ಚೌತಿವೆರಸು ವಾರುಣಿಗಿ(ಮಿ)ವಱೊಳ್ ||
ಸತತಂ ಮುಟಿ ಕೊಳ್ಳದೊಡೊ |
ಳ್ಳಿತು ಕೊಂಡೊಡೆ ಪೊಲ್ಲವೆಂದನೊಳ್ಪಿನ ಅಟ್ಟಂ || ೯೯ ||

ಮುದದಿಂ ವೈಶಾಖದ ಕಾ |
ಳದ ದಶಮಿಯೊಳಂ ಶಶಾಂಕ ಶಕ್ರಾಶೆಯೊಳೊ ||
ಡ್ಡಿದ ಮುಗಿಲಿಂ ಮುಟಿಗಳ್ ಕಾ |
ಲದೊಳಕ್ಕುಂ ಪೆಱವುದೆಸೆಯೊಳಾದೊಡಮಲ್ಪಂ || ೧೦೦ ||

1 ಪನಿತು ಮುಟಿ ತಾಂ ಮುಂದಣ ಮುಟಿಗಿನಿಸಿಲ್ಲದಂತೆ. 2 ಎಸಕದ ಪಾಲ್ಗುಣವಿನ ಬಾ। ರಸೆಯ ಚತುರ್ದಶಿಯ ಯೆಡೆಯದಿವಸದೊಳಂ ನಾ ॥ ಲ್ದೆಸೆಯೊಳೆ ಮುಸುಕಿದ ಮುಗಿಲಿಂ । ದೆಸೆಯೊಳೆ ಮುಗಿಲೊಗೆಯ ಯಿಳೆಯೊಳು ಮುಟಿಯಕ್ಕುಂ ॥ ೯೧೧ ॥ 3 ಱಿಯುಂ.

ಕಂ|| ವರವೈಶಾಖದ ಶತಭಿಷೆ |
ಭರಣಿ ಸ್ವಾತಿಯೊಳ [1]ಮಾವದೆಸೆಯೊಳ್ ಮೊಳಗುಂ ||
ಮರುತಂ ಮಿಂಚುಂ ಮೇಘೋ |
ತ್ಕರಮುಂ ತೋಱಿದೊಡೆ ಬೆಳೆಗುಮಾನೆಲನೆಲ್ಲಂ || ೧೦೧ ||

(ಇಂತು ವೈಶಾಖಮಾಸದ ಫಲಂ)

೬. ಜ್ಯೇಷ್ಠಮಾಸದ ವೃಷ್ಟಿ ಸ್ವರೂಪಂ

ವ|| ಇನ್ನು ಜ್ಯೇಷ್ಠಮಾಸದ ಫಲಮಂ ಪೇೞ್ವೆಂ—

ಕಂ|| ಸಂದಿರ್ದ ಜ್ಯೇಷ್ಠಮಾಸದೊ |
ಳೊಂದಿದ ರೋಹಿಣಿಯ ನೆರಡುಮಾಷಾಢಮುಮಂ ||
ಕುಂದದೆ ಶಶಾಂಕ ನುರ್ಚಿದೊ |
ಡೆಂದುಂ ಮೞೆಯಿಲ್ಲ(ಮಂತೆ) ಬೆಳಸುಂ ಸ್ವಲ್ಪಂ || ೧೦೨ ||

*ವೃಷಭ ಪ್ರವೇಶಂ?

ಕಂ|| ದಿನಪತಿಯಿರೆ ಕೃತ್ತಿಗೆ ಯೆರ |
ಡನೆ[2]ಯಾ ಪಾದದೊಳ ಚಂದ್ರನುಂ ಗುರುವುಂ ಸಾ ||
ಲ್ಕನೆಯೆಡೆಯೊಳ್ ಸಲೆ ಮೇ |
ದಿನಿ ಬೆಳೆಗುಂ ಬಲಿಯು ರಾಜ್ಯದಂತೆಲ್ಲೆಡೆಯೊಳ್ || ೧೦೩ ||

ಇನನಿರ್ದ ರಾಶಿಗಂತೇ |
ೞನೆಯೆಡೆಯೊಳ್ ಜೀವನಿರ್ದು ಪತ್ತುಱೊಳೊಂಬ ||
ತ್ತನೆಯಲ್ಲಿ ಬುಧಂ ಸಿತನಿರ |
ಲನಾಕುಳಂ ಸಕಲಭುವನಮೆಲ್ಲಂ ಬೆಳೆಗುಂ || ೧೦೪ ||

ಇನಗುರುಗಳ್ ವೃ(ಧ್ರ)ಷಭಮನಿಂ |
ತನುನಯದಿಂ ಪೊಕ್ಕೊಡಪ್ಪೊಡಂ ಮೇಣ್ ಗುರುವುಂ ||
ದಿನಪಂಗೆ ಶ(ನು)ತಸ್ಥಾನದೊ |
ಳನುನಯದಿಂ [3]ದರ್ಘಮುಕ್ಕು ಮರ್ಹದ್ದಾಸಾ || ೧೦೫ ||

ದಿನಪಂ ವೃಷಭಕ್ಕೆ ಬಂದಂ |
ದಿನಜೋರ್ವೀತನಯರೆರಡು ಕೆಲದೊಳಮಿರೆ ಮೇಣ್ ||
ಶನಿಯುಕ್ಕಂಗಾರಕನ |
ಕ್ಕಿನಂಗೆ ಜಾಮಿತ್ರರಾಗೆ ಬೆಳಸಿಲ್ಲೆಂತುಂ || ೧೦೬ ||

(ಇಂತು ವೃಷಭ ಪ್ರವೇಶಂ)

---

1 ಮಾವದೆಸೆಯೊಳು ಮಿಂಚುಂ ಮೊೞಗುಂ ಮೇಘೋ. 2. ಯಾಷಾಢದೊಳ. 3 ಬೆಳಸರ್ಘಮುಕ್ಕು ಱಟ್ಟಳವೀಂದ್ರಾ.

*ಇಲ್ಲಿ ವೃಷಭ ಪ್ರವೇಶ – ಎಂಬ ವಿಷಯವು (೩೮೧ರ ವರೆಗೂ) ಲೇಖಕ ಪ್ರಮಾದದಿಂದ ಇಲ್ಲಿ ಸೇರಿರ ಬಹುದು. ೩೮೧ ರಿಂದ ಇಲ್ಲಿ ಆರಬ್ಧವಾಗಿರುವ ಜ್ಯೇಷ್ಠಮಾಸದ ಫಲವು ಮುಂದುವರಿದಿದೆ.

ಮೃಗಶಿರಾದಿ ನಕ್ಷತ್ರ ಫಲಂ

ವ|| ಇನ್ನು ಮೃಗಶಿರಾದಿ ನಕ್ಷತ್ರ ಫಲಮಂ ಪೇೞ್ವೆಂ—

ಕಂ|| ಮೃಗಶಿರಮಾರ್ದ್ರೆ ಪುನರ್ವಸು |
ಭಗಣದೆ ರವಿ ನೆಲಸೆ ತ್ರಿಕದೊಳಂ ಷಟ್ಕದೊಳಂ ||
ಮೃಗಧರನಿರಲೊಳ್ಮೞೆ ಕೊಳೆ |
ಜಗಮೆಲ್ಲಂ ಬೆಳೆಗುಮೆಂದ ನೊಳ್ಪಿನ ಜಟ್ಟಂ || ೧೦೭ ||

ಅರವಿಂದ ಪ್ರಿಯನಿರೆ ಮೃಗ |
ಶಿರಾದಿ ಋಕ್ಷತ್ರಯಂಗಳೊಳ್ ಶೀತಕರಂ ||
ಭರಣಿ ಮೊದಲಾಗಿ ಯೆಂಟಱೊ |
ಳಿರೆ ಧರೆಯೊಳ್ ವರ್ಷಮಾಗೆ ಮಧ್ಯಮ ಬೆಳೆಗುಂ || ೧೦೮ ||

ತ್ರಿವಿಧಿ|| ಮೃಗಶಿರಾದಿಯ ಮೂಱು ಭಗದೊಳ್ ರವಿ ನೆಲಸೆ |
ಸೊಗಯಿಪ ಚಂದ್ರ ಮಘೆಯಯ್ದು ರಿಕ್ಷೆಯಂ |
ಪುಗೆ ಮೞೆಯಿಲ್ಲ ಬೆಳಸಿಲ್ಲ || ೧೦೯ ||

ಮೃಗಶಿರಾದಿತ್ರಯದ ಯೋಗಂ

ವ|| ಮೃಗಶಿರಾದಿತ್ರಯದ ಯೋಗಮಂ ಪೇೞ್ವೆಂ—

ಕಂ|| ಆಳಾಪಮೇನೊ ಜ್ಯೇಷ್ಠದ |
ಕಾಳದ ಸಪ್ತಮಿಯ ಮೃಗಶಿರಾದಿಯ ಫಲಮಂ ||
ಲೀಲೆಯ ಭಾವಿಸಲೊ(ದೊ)ಳ್ವೞೆ |
ಗಾಳಿಯ ರಚಿಯಿಸದೆ ವಿಪು(ಮ)ಲ ಸತ್ಫಲಮಕ್ಕುಂ || ೧೧೦ ||

ಮೃಗಶಿರೆಯಾರ್ದ್ರೆ ಪುನರ್ವಸು |
ಭಗಣದಿ ರವಿ ನೆಲಸೆ [1]ಪಂಚಮಿಯೊಳಂ ಶಶಿ ಮೆ ||
ಯ್ದೆಗೆಯದೆ ನಿಲೆಯುಂ ಮೞೆ ಕೊಂ |
ಡಗಣಿತಮಾ ನೆಲಕೆ ಬೆಳೆವ ಬೆಳಸತಿಕಷ್ಟಂ || ೧೧೧ ||

ಖರಕರ[2]ನುಂ ಮೃಗತ್ರಯದೊಳ್ |
ಚರಿಯಿಸೆ ಚಂದ್ರಂ ಚತುರ್ಥಯುಗ್ಮದಿ ನೆಱೆ ಮೞೆಯುಂ ||
[3]ನಿರತಿಶಯಮೆನಿಸಿ ಕೊಳ್ಳವು |
ಪರಮಾರ್ಥಂ ಮಧ್ಯಮಂ ಫಲಂ ವಸುಮತಿಯೊಳ್ || ೧೧೨ ||

ಸೋಮತ್ರಯ:ದೊಳ್ ರವಿ [4]ನಿಲೆ |
ಸೌಮಂ ತ್ರಿಕ [5]ಷಟ್ಕದೊಡನೆ ನಡೆವೊಡೆ ಜಗದೊಳ್ ||
ಪ್ರೇಮದೆ ಮೞೆ [6]ಕೊಳೆ ಸಾಹ್ದರ |
ವೀ ಮಹಿಯೊಳಗೆಲ್ಲ ಮುತ್ತಮಂ ಬೆಳಸಕ್ಕುಂ || ೧೧೩ ||

---

1 ಪಂಚಯುಗದಿ. 2 ನುಂ ಜಗ, ನಿಂದುತ್ರಯ. 3 ನಿರುತಮೆನಸೆ. 4 ನೆಲಸೆ. 5 ದೋಷದೊಡನೆ. ಸಾಹ್ದರದೀ ಮಹಿಯೊಳಾಸಂಥ(ದ)ನೆಂಬ ಮುನಿಮಧ(ತ)ದಿಂ.

ಪೂರ್ವಾಭಾದ್ರಾದಿ ಭೇದಂ

*ವ|| ಪೂರ್ವಭಾಗೆ ೬, ಉತ್ತರಭಾಗೆ ೬, ಪಶ್ಚಿಮಭಾಗೆ ೧೦, ದಕ್ಷಿಣಭಾಗೆ ೬- ಇಂತಿಪ್ಪ ತ್ತೆಂಟು ನಕ್ಷತ್ರಂಗಳೊಳೆ ನಾಲ್ಕುಂ ತೆಱದ ಮುಟಿಯಾಗದ(ಲ)ವಱ ಫಲಮಂ ಪೇೞ್ವೆಂ--

ಕಂ|| ಪಿತೃಮೂಲಾನಲ ಪೂರ್ವ |
ತ್ರಿತಯದೊಳಂ ಮುೞಿಗಳಾಗೆ ಪುಗಿಲೊಳ್ ಕೞಿಗುಂ ||
ತ್ರಿತಯೋತ್ತರದಿತಿ ರೋಹಿಣಿ |
ಯುತಮಿವು ಮಧ್ಯದ ವಿಶಾಖೆ ಕೞಿಯಲ್ ಕೞಿಗುಂ || ೧೧೪ ||

ಅನುರಾಧೆ ಪುಷ್ಯ ಹಸ್ತಾ |
ಶ್ವಿನಿ ಚಿತ್ರೆ ಶ್ರವಣ ಮೃಗಶಿರಂ ರೇವತಿಯುಂ ||
ವಿನುತ ಧನಿಷ್ಠಾಭಿ(ಜಿದೆಂ)ಧೆ ಯೆಂ |
ಬಿನಿತುಂ ಕೞಿಯಲ್ಕೆ ಪೋಗಿಲೊಳ್ ಮುೞಿಯುಕ್ಕುಂ || ೧೧೫ ||

ಸ್ವಾತಿ ಫಣಿ ಭರಣಿ ಶತಭಿಷೆ |
ಭೂತೇಶಂ ಜ್ಯೇಷ್ಠೆ ಮುಂಚೆ ಕೞಿದೊಡೆ ಮುೞಿ ಧಾ ||
ತ್ರೀತಳಕೆ ನೆಱಿಯೆ ಕೞಿಯದು (ಪೊದುವು) |
ಸಾತಗುಣಾನಂದನೆಂಬ ಮುನಿಮತದಿಂದಂ || ೧೧೬ ||

(ಇಂತು ವೃಷಭ ಪ್ರವೇಶಾದಿ)

(ಇಲ್ಲಿಂದ ಹಿಂದೆ ಆರಂಭಿಸಿರುವ 71ನೆಯ ಪುಟದ ಜ್ಯೇಷ್ಠಮಾಸ ವೃಷ್ಟಿಸ್ವರೂಪವು ಮುಂದುವರಿದಿದೆ)

ಕಂ|| ಜಯಪುಷ್ಕರ ಜಯಧೂಳಿ ವಿ |
ಜಯ ವೀಥಿಯೊಳಿಂದು ಜ್ಯೇಷ್ಠಸಿತಸಪ್ತಮಿಯೊಳ್ ||
ನಯದಿಂ ನಡೆವಂತಾ ಧೂ |
ಳಿಯೆ ಪೊಲ್ಲದು ಪೊಳ್ದಿದು ಪೊಳ್ತಿತೆಂದಂ ಬಿಟ್ಟಂ || ೧೧೭ ||

ತ್ರಿವಿಧಿ|| ಅಮಳಿನ ವೈಶಾಖದಮವಾಸೆಯೊಳ್ ಕೂಡೆ |
ಕಮಲಜಋಕ್ಷೆ ಮುೞಿಕೊಳೆ ವಸುಧೆ ಧಾ |
ನ್ಯಮುನೊಳ್ಳಿತಾಗಿ ಬೆಳೆಯುಕ್ಕುಂ || ೧೧೮ ||

ಕಂ|| ಅನುನಯದಿಂ ಜ್ಯೇಷ್ಠೆಯ ಮಘೆ |
ಗನುರಾಧೆಯೆಸೆವ ಶಶಿ ಚಿತ್ತೆಗಂ ಪೊಕ್ಕಂ (೯ಲ್ಲಂ) ||
ದನವರತಂ ನಡೆವೊಡೆ ಬೞಿ |
ನನಮೋಘಂ ತಪ್ಪದೆಂದ ನೊಳ್ಪಿನ ಬಿಟ್ಟಂ || || ೧೧೯ ||

*ಇಲ್ಲಿಂದ "ಜಯಪುಷ್ಕರ" ಎನ್ನುವ ಕಂದದವರೆಗೆ ೩ ಕಂದಗಳು ಒಂದು ಪ್ರತಿಯಲ್ಲಿಲ್ಲ.

ಕಂ|| ಸಂದಿರ್ದ ಜ್ಯೇಷ್ಠಮಾಸದೊ |
ಳೊಂದಿದ ರೋಹಿಣಿಯುನೆರಡುಮಾಷಾಢಮುಮಂ ||
ಕುಂದದೆ ಶಶಾಂಕನುರ್ಚಿದೊ |
ಡೆಂದುಂ ಮೞೆಯಿಲ್ಲ ಬೆಳಸುಮಲ್ಪಂ ಸ್ವಲ್ಪಂ || ೧೨೦ ||

ಇನನಿಂ ಭರಣಿ ಚತುಷ್ಕದೆ |
ಪನಿತೊಡೆ ಮೞೆಯುಂ ಪನಿ ಪನಿಯಿಸದಲ್ಪಂ ಮೇ ||
ದಿನಿಗೆ ಕಡೆಯಿಲ್ಲ ಮೞೆಯಿ |
ಲ್ಲನುಪಮಗುಣನಿಳಯ[1]ನೆಂದ ಅಟ್ಟವೆಡಂಗಂ || ೧೨೧ ||

ತ್ರಿವಿಧಿ|| ಜ್ಯೇಷ್ಠಮಾಸದ ಕಾಳದಷ್ಟಮಿಯೊಳ್ ಕೂಡೆ |
ನಿಟ್ಟಿಸಿ ಪೇೞ್ಗೆ ನಡುವಿರುಳ್ ಮೊಱಗಲ್ಕೆ |
[2]ಸೃಷ್ಟಿಗೆ ಮೞೆಯ ಬಱನೆಂತುಂ || ೧೨೨ ||

ಕಂ|| ಚಾರುತರಜ್ಯೇಷ್ಠಶುದ್ಧದ |
ಬಾರಸೆಯುಂ ಪೂರ್ಣಿಮಾಸೆಯುಂ ನಾಲ್ಕು ದಿನಂ ||
ವಾರುಣಮೆಂದಱ ಫಲಮಂ |
ಆರಯ್ಯಲ್ಕೊಂದು ತಿಂಗಳಕ್ಕುಂ ಕ್ರಮದಿಂ || ೧೨೩ ||

[3]ಇನಿಸಿನಿಸು ಮುಗಿಲ ತುಂತು |
ರ್ವನಿಯು ತಟಿಲ್ಲತೆಯ ವಿಮಳ ಶಶಿರವಿಗಳ್ ಸೋ ||
ಮನ ಶುಕ್ರನ ದೆಸೆಯಿಂದೆಸೆ |
ವನಿಲನ ನಯದಿಂದೆ ನಿಲ್ಕುಮಱ(ಱ) ಧಾರಿಣಿಯೊಳ್ || ೧೨೪ ||

*ಬಾರಸೆ ಮೊದಲಾಗಂತಾ |
ವಾರುಣನಾಲ್ಕಱೊಳಮಾವದೆವಸದ ಮೞೆಯುಂ ||
ದಾರ್ಶ್ರಿಗಾ ಶ್ರಾವಣದ ಚ |
ತ್ವಾರಿಯುಥಾಕ್ರಮದೊಳಯ್ದಿ ತಾಂ ಬಱನಕ್ಕುಂ || ೧೨೫ ||

ತಾರೆಗಳಯ್ದು ಮನಂತಾ |
ತಾರೇಶಂ ಗೆಲ್ಗೆ ಸೋಲ್ಗೆ ವಕ್ರಿಸೆ ಮೇಣಾ ||
ತಾರೆಗಳೆಂತುಂ ತೀಡುವ |
[4]ವಾರುಣಿಗಳ್ ಪೊಯ್ಯೆ ಮೞೆಗಳೆಂಬರ್ ಕೆಲಬರ್ || ೧೨೬ ||

---

1 ನೆಣಪ ಅಟ್ಟನ ಮತದಿಂ, ಜ್ಯೇಷ್ಠಮಾಸದ ಫಲಮಂ ಪೇೞ್ವೆನು—"ಜ್ಯೇಷ್ಠಮಾಸದ" ಎಂಬ ತ್ರಿವಿಧಿ ಅರಬ್ಧವಾಗಿದೆ (ಒಂದು ಪ್ರತಿಯಲ್ಲಿ). 2 ಶ್ರೇಷ್ಠಿಗೆ. 3 ಮುನಿಸಿನಿಸಿಗಳು ಮುಗಿಲಕ್ಕುಂ ತೋ। ರ್ವನಿಯತಮಿಲ್ಲ ದೆಸೆಯ. 4 ಧಾರಿಣಿಯೊಳ್ ತೋೞಯಮತದೊಳೆಂಬರ್ ಕೆಲಬರ್.

*ಇಲ್ಲಿಂದ 73ನೆಯ ಪತ್ರವಿಲ್ಲವೆಂದು ಗ್ರಂಥಪಾಠವು ಒಂದು ಪ್ರತಿಯಲ್ಲಿ ಸೂಚಿಸಿದೆ.

ಕಂ|| ಮಾತೇಂ ಜ್ಯೇಷ್ಠದ ಚಿತ್ರೆ |
ಸ್ವಾತಿ ವಿಶಾಖೆಯೊಳೆ ಶುಭ್ರಮಾಗಿರ್ಕುಂ ಜೇ ||
ಮೂತಂ ಶ್ರಾವಣದೊಳ್ ಮ |
ತ್ತಾತಾರೆಯ ಕೂಡೆ ತಾನೆ ಪೆರ್ಮಳೆಯಕ್ಕುಂ || ೧೨೭ ||

ವರಜ್ಯೇಷ್ಠ ಶುದ್ಧಪಕ್ಷದ |
ಮರುಳಾದಿಯ ನಾಲ್ಕು ರಿಕ್ಷೆ ಪೊಱಗಾಗಿರೆ [1]ತ ||
ತ್ವರದಿರದೆರಡೃಕ್ಷಂಗಳ್ |
ದೊರೆಕೊಳೆ ಭೂತಾದಿ ನಾಲ್ಕು ದಿವಸಂಗಳೊಳಂ || ೧೨೮ ||

ಮುದದಿಂದಂ ನೋಳ್ಪುದು ಜ್ಯೇ |
ಷ್ಠದ ಪುಣ್ಣಿಮೆಯಂದು ಪಡುವ ಕೊರಡುದಯಿಸೆ ನೀ ||
ಗದಿರಾಗೆ ಸುರಾಸೆಯ ಬೀ |
ಸಿದ ಗಾಳಿಯ ಮುಗಿಲ ಕಾಣ್ಕೆಯಿಂ ಬಱನಕ್ಕುಂ || ೧೨೯ ||

ಫಲಾಲನೆ ಜ್ಯೇಷ್ಠದ ಪುಣ್ಣಿಮೆ |
[2]ಯೊಳೆ (ಪಡುವ ಕೊರಡುದಿಸೆ) ಪೂರ್ವಾಷಾಢದೊ(ಳೆ)ಳ್ ತೋಱದೊಡ ||
ಗ್ಗಳ ಪೆರ್ಮಳೆ ಯಂದಿಳೆಯೊಳ್ |
ಫಳಿಯಿಸೆ(ಸು) ನೀಂ ದ್ರೋಣಸಂಖ್ಯೆಯೆನಿತೆಂಬುದವಂ || ೧೩೦ ||

ಗಣಿದ[3]ದೊಳೇನೆರಡುಂ ಫಾ |
ಲ್ಗುಣದೊಳ್ ಪದಿಮೂಱುಂ ಭರಣಿಯೊಳ್ ಪದಿನಾಲ್ಕುಂ ||
ಗಣನೆಯ ದ್ರೋಣಂಗಳ್ ಧಾ |
ರಿಣಿಯೊಳ್ ಕೊಳೆ ಪ್ರಥಮ[4]ವೃಷ್ಟಿಯೊಳ್ ಫಳಿಯಿಸುಗುಂ || ೧೩೧ ||

ಶತ[5]ಮುಖ ಪಂಕರುಹೋದ್ಭವ |
ಶತಭಿಷೆಯೊಳ್ ದ್ರೋಣವಯ್ದು ಮೂಲಾನಿಲ ಸಂ ||
ನುತ ಚಂದ್ರಮಿತ್ರರೊಳ್ ಪೇ |
ಳ್ದು ತೋಱೆ [6]ಪದಿನಯ್ದು ನಿಲ್ಕುಮಾ ದ್ರೋಣಂಗಳ್ || ೧೩೨ ||

ಹರಿಹರ ತೋಯಾನಿಲ ವಸು |
ಧರೆ [7]ಚಿತ್ರೆ ವಿಶಾಖೆ ಮಘೆಯು ಮೆಂಬಿವಱೊಳ್ (ತಾಂ) ||
ದೊರೆಕೊಂಡಾದಿಯ ಮಳೆಯಂ |
ಪರೀಕ್ಷಿಸಾ ದ್ರೋಣಸಂಖ್ಯೆ ಪದಿನಾಲ್ಕಕ್ಕು || ೧೩೩ ||

---

1 ತಪ್ಪರದಿರದೆರಡೃಕ್ಷಂಗಳು. 2 ಯಂದು ಪಡುವ ಕೊರಡುದಯಿಸೆ ಮಳೆ ಪೂರ್ವಾ. 3 ದೊಳೆರಡೆರಡುಂ. 4 ಜ್ಯೇಷ್ಠ. 5 ಮುಖಪೇಶರು. 6 ಪಡಿಯಿನೆನಿಕು. 7 ಚೈತ್ರಾಂಗರ ವಿಶಾಖೆ.

ಕಂ|| ಪೂರ್ವಾಷಾಢೆದ ಪುಷ್ಯಂ |
ಪೂರ್ವಾಭಾದ್ರತ್ರಯೋತ್ತರರ್ಕ್ಷದ ಮೊದಲೊಳ್ ||
ಪರ್ವಿದ ಮಟಿಯಿಂ ದ್ರೋಣಂ |
[1]ಸರ್ವಜ್ಞಮತೋಕ್ತಿಯಿಂದ ಮಿರ್ಪತ್ತಕ್ಕುಂ || ೧೩೪ ||

ಎಸೆವ ಪುನರ್ವಸು ರೇವತಿ |
ಪಸುಪತಿ ಹಸ್ತಂಗಳೆಂಬ ಋಕ್ಷಂಗಳೊಳಂ ||
ಮಸಗಿದ ಮಟಿಯಿಂದಂ ಭಾ |
ವಿಸಿ ಪೇಲ್ವುದು ದ್ರೋಣಮಿರ್ಪತೆಂಬುದ[2]ನೆಂದಂ || ೧೩೫ ||

ಆದರದೆ ಜ್ಯೇಷ್ಠದಪರದ |
ಬೂದಿಯು ಮೃಗಶಿರದೆ(ರಾದಿ) ಕೊಂಡ ಮಟಿಯಿಂ ಬೆಳೆಗುಂ ||
ಮೇದಿನಿ ಪೊಱಗಣ(ವರ) ನಾಲ್ಕಱೊ |
ಳಾದೊಡೆ ಪಾರಕ್ಕ ಬರ(ಱ)ಗು ಬೆಳೆಗುಂ ಸ್ವಲ್ಪಂ || ೧೩೬ ||

ವರಜ್ಯೇಷ್ಠ ಬಹುಳ ನವಮಿಯೊ |
ಳಿರೆ ರೇವತಿ ರಿಕ್ಷ ಕೂಡೆ ಮಿಥುನದೊಳಿನನೊ ||
ಲ್ದಿರೆ ಋತುಕಾಲದ ವಧುವೊಲ್ |
ಪುರುಷಾಪೇಕ್ಷೆ[3]ವೊಲೆ(ಯನೆ) ಮಟಿಯನಾಪೇಕ್ಷಿಸುಗುಂ || ೧೩೭ ||

ಅಂತದರ ದಸಮಿಯಶ್ವಿನಿ (ಯೊಳಗಾ) |
ಯ(ನ)ಂ ತೊಡಗಿ ವಿರಿಂಚರಿಕ್ಷಯೊಳ್ ಮಟಿಕೊಂಡಂ ||
ದೆಂತುಂ ಪುಟುಗಳ್ ಫಲ |
ಸಂತತಿಯಂ ತಿಂಗು ತುದಿ[4]ಯೊಳಕ್ಕುಂ ಜೋಳಂ || ೧೩೮ ||*

ವ|| ಜ್ಯೇಷ್ಠಮಾಸದ ಪುಣ್ಣಿಮೆಯೆ ಪೋದ ಪಾಡಿವ ಪೂರ್ವಾಷಾಢ(ದ ಪ್ರಥಮದಿಂ) ತಗುಟ್ದು ಬರ್ಪ ನಕ್ಷತ್ರಂಗಳೊಳ್ ಪಡೆವ ದ್ರೋಣಸಂಖ್ಯೆಯ ಫಲಮಂ ನೋಡಿಕೊಳ್ವುದು—

ಕಂ|| ನೆಱೆ ಗರ್ಭಚಿಹ್ನಮಾದೊಡೆ |
ಮಱೆಯದೆ ಪೇೞ್ ಶ್ರವಣಮಾದಿ ನಾಲ್ಕರ್ಕ್ಷದೊಳಂ ||
[5]ಕಱೆಯಲ್ ಬಶಧಾತುಗಳಂ |
[6]ತಱ(ರಿಸ)ಪಲುಮವು ಕೂಡೆ ನಾಲ್ಕಱೊಳ್ ಮಟಿಯಕ್ಕುಂ || ೧೩೯ ||

ಮ|| ರವಿಚಂದ್ರಾಂಶದೊಳಾದ ವೃಷ್ಟಿ ಕಱೆಯಲ್ [7]ಕರ್ವ್ವಕ್ಕು ಮಾರಾಂಶದೊಳ್ |
ಭುವನಕ್ಕೊಂದಿರೆ ದೇವಮಂತ್ರಿ ಬುಧರೊಂದಂಶಂಗಳೊಳ್ ಸರ್ವಥಾ ||
ನ್ನವನೂನಂ ಶನಿಯಂಶಮಾಗೆ ಬೆಳೆಗುಂ ಭೂಚಕ್ರದೊಳ್ [8]ಕರ್ಬು ಕೋ |
ದ್ರವಮೆತ್ತಂ ಸಿತನಂಶದೊಳ್ ಮಟಿ ಜಗತ್ಪ್ರಖ್ಯಾತಮುಂ ಅಟ್ಟುಗಾ || ೧೪೦ ||

---

1 ಸರ್ವಗ್ನಾಮಥದಿಂದ ಯಿಪ್ಪತಕ್ಕುಂ. 2 ನೊಂದಂ. 3 ಯೊಳೆ. 4 ಯೊಳೆ ಜೇಯಕ್ಕುಂ ಬೆಳೆಗುಂ. 5 ಅಱೆಯಲ್. 6 ತರಿಸಲು ಮೂಡಲಾಗಿ ನಾಲ್ಕು ಮೊಳ್ಕಟಿ. 7 ಕಬ್ಬಕ್ಕು, ಲ್ಪಕ್ಕುಮಾ. 8 ಕೂಡೆ ಕೋದಮುಮತ್ತಂ.

* ಇಂತು ಜ್ಯೇಷ್ಠಮಾಸದ ಫಲಂ ಸಮಾಪ್ತಂ – ಎಂದು ಒಂದು ಪ್ರತಿಯಲ್ಲಿದೆ.

ಕಂ|| ಮತ್ತಮ[ಮ]ವಾಸೆಗಳ್ ಮೂ |
ವತ್ತು ದಿನಂಗಳನೆ ಕೊಂಡೊಡೊಳ್ಳಿತು ದಿನಮಂ ||
ತೊತ್ತಿದೊಡೆ ಕುಸಿಗು ಮಿಱಿದೊಡ |
ವೊತ್ತರಿಸುಗುಮರ್ಘಮೆಂದ ನೊಳ್ಪಿನ ಅಟ್ಟಂ || ೧೨ ||

ಪುಣ್ಣಿಮೆ ಕುಸಿದೊಡೆ ಕುಸಿಗುಂ |
ಪುಣ್ಣಿಮೆ ಪೆರ್ಚಿದೊಡೆ ಪೆರ್ಚುಗುಂ ನಡೆವರ್ಗಂ(ಘಂ) ||
ಪುಣ್ಣಿಮೆ ಸರಿದಿನಮಾಗಲ್ |
ಮುನ್ನಮೆ ನಡೆವರ್ಘಮೆಂದನೊಳ್ಪಿನ ಅಟ್ಟಂ || ೧೩ ||

ಉ|| ವರಸಂಕ್ರಾಂತಿಯ ಭುಕ್ತಿಯಿರ್ದ ತಿಥಿಯಂ ನೀ[1]ನರ್ಧಿಸಾಶ್ಯೈಲದಿಂ (೭) |
ದಿಱದೊಂಭತ್ತನೆ (೯) ಕೂಡಿ ಯೆತ್ತು ಶಿಖಿಯಿಂ (೩) ಶೇಷಂಗಳೊಂದಾದೊಡಂ ||
ತಿರಡುಂ ಸೊನ್ನೆಯುಮಾಗೆ ಭುಕ್ತಿ ಸೌಮ್ಯಸಸಿಯಿಂದಾಲೋಕದೊಳ್ ಪೆರ್ಚುಗುಂ |
ತ್ವರಿತಂತಾದುಳಲಿ(ವಿ)ಂದೆ ಕುಂದಿಸುಗುಮಂತಾದರ್ಘಮುಂ ಅಟ್ಟುಗಾ || ೧೪ ||

(ಇಂತು ಅರ್ಘಖಂಡಂ)

೬. ನಕ್ಷತ್ರ ಗುಣಕಾರಂ

ವ|| ಇನ್ನು ನಕ್ಷತ್ರ ಗುಣಾಕಾರಮಂ ಪೇೞ್ವೆಂ—

ಕಂ|| ಉಡುರಾಶಿಗ್ರಹಸಮಿತಿಗೆ |
ಕಡುಜಾ(ಬಾ)ಣಂ ಬಯ್ತುಮಾಡೆ [2]ಪೂರ್ವಧ್ರುವಮಂ ||
ತಡೆಯದೆ ಅಟ್ಟಂ ರೂಢಿಗೆ |
ಬೆಳೆಗುಂ ಬಿತ್ತಿರ್ದ ವಿದ್ಯೆಯಂ ವಿರಚಿಸಿದಂ || ೧೫ ||

ಮಾತೇನಶ್ವಿನಿ ಭರಣಿ |
ಸ್ವಾತಿ ಶ್ರವಣಕ್ಕಂ ತೊಂಭತಂ ಕೊ(ಳ್)ಳು ಮಘೆ ||
ನೀತಿಯಿನೊಂಭ್ನೆನೂಱಱೊ (೯೦೦) |
ಳೋತಿ(ಡೆ)ರೆ ಪನ್ನೊಂದು (೧೧) ಗೂಡಿಕೊಳು (೯೧೧) ಗುಣಕಾರಂ|| ೧೬ ||

ಕೃತ್ತಿಗೆ [3]ವಿಪುಲೆಗೆ ಜ್ಯೇಷ್ಠೆಗೆ |
ಚಿತ್ತೆಗೆ ಮೃಗಶಿರೆಗೆ ಶತವಿಶಾಖೆ[4]ಗಳೊಳ(ಳ್ಳೆ) ||
ಯ್ವ(ವ)ತ್ತು ಧನಿಷ್ಠೆಗೆ ಘಟಿಯಿಸು |
ಗೆತ್ತಂ ಸೀಂ ನೂಱಮೂವತಯ್ದಂ (೧೩೫) ಅಟ್ಟಾ || ೧೭ ||

[5]ತಿಯಯ್ದುವನೆ ಮಾಣ್ಗುಮೆಪ್ಪ |
ತಯ್ದಂ (೭೫) ಕೊಳು ಪುಷ್ಯ ಹಸ್ತಮಾಶ್ಲೇಷೆ[6]ಗಮಿಂ ||
ತಯ್ದಂ ಬಿಸುಟಿನ್ನೂಱಂ (೧೯೫) |
ಮೆಯ್ದಗೆಯದೆ ಗುಣಿಸಿಕೊಳ್ವುದರ್ಘದ್ವಾಸಾ || ೧೮ ||

1 ನರ್ಥಿಸುತ್ತೇಱಱಂ । ದಿರಿ ತೊಂಭತ್ತನೆ ಕೂಡಿ. 2 ಪೂರ್ವಾರ್ಧಮುಮಂ. 3 ವಿಗಱಗೆ. 4 ಗಮ್ಯವಳ್ಕಂ (ಮುಯ್ವಳ್ಕಂ)... 5 ಇದುವನೆ ಮೂಱಣು. 6 ಗೆ ಮಿಂತ್ಯನೂಱಂ ಮೆಯಿದೆ.

ಕಂ|| ಉತ್ತರೆ ಪೂರ್ವಾಭಾದ್ರೆಗೆ |
ಉತ್ತಮ(ರ) ಭಾದ್ರಪದಕ್ಕಂತೆ ಪೂರ್ವೆಗೆ ಮಘೆ(ಖೆ)ಗೆ ||
ಪ್ಪತ್ತು ಕಡೆಯಾಗಯುಂ ನೂ |
ಱುತ್ತಮ (೧೨೦) ಗುಣಕಾರಂ[1] ಮುಕ್ಕುಮರ್ಹದ್ದಾ ಸಾ || ೧೯ ||

ಉತ್ತರಷಾಢಕ್ಕಂತ |
ಯ್ಪತ್ತಯ್ದಧಿಕಮಾ(ಭಾ)ಗಿಸಲ್ಕಿನ್ನೂಱಿಂ ||
ಮತ್ತವಱೊಳಯ್ದು ಗುಂದಿಸು (೨೫೦) |
ವೃತ್ತಭುಜಾ ಪೂರ್ವಷಾಢಕಿವು ಗುಣಕಾರಂ(ಗಳ್) || ೨೦ ||

ರೇವತಿ ವಿಶಾಖೆ ರೋಹಿಣಿ |
ಗಾವರಿಸಿರೆ ನೆಱಪುಗಱುದು (೧೫೦) ನೂರಯ್ವತ್ತಂ ||
ಭಾವಿಪನುರಾಧೆಗಾದ್ರ್ರೆಗ |
ಮಾವಿಧದಿಂ ಕೊಳ್ವುದಱುದು ನೂಱಿಪ್ಪತ್ತಂ (೧೨೦) || ೨೧ ||

ಮನುಚರಿತ ಮೂಲಕಱುವ (೬೦) |
ತ್ತನೆ ಕೊಳ್ವುದು ತಪ್ಪದಿಪ್ಪತ್ತೇೞಿಂ ಭಗಣ ||
ಕ್ಕನುನಯ್ಥದಿಂ ಗುಣಕಾರಮ |
ನನುಪಮಮತಿ ಮಾಚಿಕಂಗೆ ಪೇೞ್ದಂ ಅಟ್ಟಂ || ೨೨ ||

(ಇಂತು ನಕ್ಷತ್ರ ಗುಣಕಾರಂ)

೭. ರಾಶಿ ಗುಣಕಾರಂ

ಕನ್ನೆ ತೊಲೆ ಮೀನ ಮಿಥುನ |
ಕ್ಕುನ್ನತ ವೃಷಮೇಷ [2]ವೃಶ್ಚಿಕಕ್ಕಂ ನಯದಿಂ ||
ಮನ್ನಿಸೆ ನೂರಯ್ದಂ (೧೦೫) ಕೊಳು |
ಸನ್ನುತ ಧನುಕುಂಭಕಂತೆ ತೊಂಭತ್ತುವರಂ (೯೦) || ೨೩ ||

ಹರಿಗೊಂಬತ್ತುಂ (೯) ಕರ್ಕಿಗೆ |
ನಿರುತಂ ನೂಱರ್ಪತೊಂದು (೧೨೧) ಮಿದು ಗುಣಕಾರಂ ||
ಪರಿವಿಡಿದಪ್ಪದೆ ಕೊಳು ಪ |
*ನ್ನೆರಡುಂ ರಾಶಿಗಳಗುಣಮನೊಳ್ಪಿದ ಅಟ್ಟಾ || ೨೪ ||

(ಇಂತು ರಾಶಿ ಗುಣಕಾರಂ)

೮. ಗ್ರಹ ಗುಣಕಾರಂ

ಕನಕ ಬುಧರವಿಜರಱುವ (೬೦) |
ತ್ತನೆ ಕೊಳ್ವುದು ಸಸಿಗೆ ಕೊಳ್ವುದಱುವತ್ತಯ್ದಂ (೬೫) ||
ದನುಜಗುರುಗೆಪ್ಪತಯ್ದಂ (೭೫) |
ಮನುನಿಭ ಸುರಗುರುಗೆ ಕೊಳ್ವುದೆಂಭತ್ತಯ್ದಂ (೮೫) || ೨೫ ||

1 ಮಾಗಿಯುಂ ತಾನಕ್ಕುಂ. 2 ಹಕಕ್ಕೆ ವೃಶ್ಚಿಕಲಿಂಗಂ.
*ಮಕರ ರಾಶಿ ಬಿಟ್ಟುಹೋಗಿದೆ.

ಕಂ|| ಸಲೆ ನೂಱಮೂವತಯ್ದುಂ (೧೩೫) |
ಜಲಜಸಖಂಗುಡುಪತಿಗೆ *ಕುಡುಗೆಲ್ವಕ್ತ್ರಂ (೬೦) ||
ಸುಲಲಿತ ವಿಭ್ರಮ ಗು(ಗ)ಣಿತಂ |
ಪೊಲಿಗಿಡದವನಱಿಡು ನೀನೆ (ನೆಱೆ) ಕಲಿವುದು ಱಟ್ಟಾ || ೨೬ ||

(ಇಂತು ಗ್ರಹ ಗುಣಕಾರಂ)

೯. ಭಗಣರಾಶಿ ಗ್ರಹಂಗಳ ಗುಣಕಾರಂ

ಚಂ|| ಋತು ನಿಧಿ ಪನ್ನಗಾಬ್ಧಿ (೪೮೯೬) ಭ(ರ)ಣಕ್ಕೆ ವಿಯತ್ತಳಬಾಣರುದ್ರ (೧೧೫೦) ಸ |
ನ್ನುತವಿವು ರಾಶಿಗಳ್ಗೆ ನಭಮಂಬರಮುಂ ರಸಮುಂ (೬೦೦) ಗ್ರಹಕ್ಕೆ ಸ ||
ನ್ನುತ ಗುಣಕಾರ ರಾಶಿಗಳ ಲೆಕ್ಕಮಿವಂ ನೆಱೆ ಭಾವಿಸುತ್ತು ಮಾ |
ಪ್ರತಿಗಳ ಕುಂದು ಪೆರ್ಚನಱಿ ಮಾಚಿಗ ಱಟ್ಟ[1]ನ ಪೇಳ್ದ ಮಾಱ್ಕೆಯಿಂ || ೨೭ ||

(ಇಂತು ಭಗಣರಾಶಿಗ್ರಹಂಗಳ ಗುಣಕಾರಂ)

ವ|| ನಂದಾಚಾರ್ಯರ್ (ಮಾಡಿದರ್ಘಖಂಡಮಂ) ಮತದ ನಕ್ಷತ್ರರಾಶಿ ಗುಣಾಕಾರಂಗಳ್ ಪೇಱ್ವೆಂ—

೨೦ ೨೫ ೨೯ ೧೫ ೩೧ ೨೧(೪೦) ೨೭ ೧೫ ೨೦ ೩೧
ನರ ಮುರ ಧಾತ್ರಿ ಮಾಟ ಕುಲ ನಾಭಿ ಸುರಂ ಮುಕ ನಾರಿ ಪೂರಿ(ಲಿ)(ಯುಂ) |
೨೮ ೧೪ ೧೯ ೨೧ ೨೧ ೨೦ ೨೪ ೨೦ , ೫೧ ೩೭
ದರಿ ಭಟ(ದಿ) ಧೂಪಿ ಕಾರ ಕರಿ ನಾರಿ ಭರಂ(ಣ) ನಿರ ಪಾಮು ಸೂಲಿ(ಯುಂ) ||
೨೧ ೨೪ ೩೯ ೩೮ ೪೦ ೨೩
ಪುರಿ ಭರಿ ದಂಗ ದಾಡಿ(ನಾ) ನಿಭ(ಮುಂ) ಗುರು †........ವಿವೆಂಬ ಸಂಖ್ಯೆಯಿಂ |
ಧರೆಗೆಸೆದಿರ್ಕುಮಶ್ವಿನಿ ಮೊದಲ್ ಕಡೆ ರೇವತಿಯಾಗೆ ರಿಕ್ಷೆಗಳ್ || ೨೮ ||

(ಇಂತು ನಕ್ಷತ್ರ ಗುಣಕಾರಂಗಳ್)

ಚಂ|| [2]ಖರ ಧರ ಜಾಯು ಖಗ ಜಗ ದಿಂ ನಿರು ಮಾಯು ಸೂರಿ ಯಿ |
ಪ್ಪರುಗಿ ಜಪಂ ಮುದಂ ಮನಿಂ [3]ಇವಜಾಂತರದಾದಿ (ರಾಶಿ)ರಿಕ್ಷೆಗಳ್ ||
ನಿರುಪಮನಾಟ್ಯ ಕಾಲ ಮಲ ದೂಷ್ಯ ಗುರು ನಾಭಿ [4]ನಾರಿಯೆಂದು ತಾಂ |
ಪರಿವಿಡಿಯಿಂದ(ದಿ)ನಾ(ದಿ)ಸಹಿತಂ ಗ್ರಹದಂಶಮುಮಾಗವೋಕ್ತಿಯಿಂ || ೨೯ ||

(ಇಂತು ರಾಶಿಗ್ರಹ ಗುಣಕಾರಂ)

(ಇಂತು ನಂದಾಚಾರ್ಯಮತದ ನಕ್ಷತ್ರರಾಶಿಗ್ರಹ ಗುಣಕಾರಂಗಳ್)

ವ|| ಇನ್ನೊರ್ವಾಚಾರ್ಯರ ಮತಮಂ ಪೇಱ್ವೆಂ—

ಕಂ|| ಶ್ರವಣಂ ಸ್ವಾತ್ಯಶ್ವಿನಿಗಂ |
[5]ನವತಿ (೯೦) ಕೃತಂ ಗುರುಗೆ ಹಸ್ತಕಂ ಸಮನಿಕುಮೋ ||
ವದೆ ಪೊಯ್ಗೆ ಯೆಪ್ಪತಯ್ದುಂ (೭೫) |
ತವು ಫಣಿಗಂ ನೂಱತೊಂಭತಯ್ದುಂ (೧೯೫) ಮಾಚಾ || ೩೦ ||

---

1 ಱಟ್ಟದಿಂ. 2 ವೃತ್ತ ಖರ ೨೨ ದಳೆ ೨೮ ಜಯ ೧೮ ಖರ ೨೨ ಜಗ ೩೮ ದಿಗನೆ ಕೊಳುವುದು ಸಸಿ. 3 ಮೇಷಾತದಾದಿ ರಿಕ್ಷೆ. 4 ನಾರಿನ ಪರಿವಿಡಿ. 5 ನಮತಿ ಗುರುಗೆ... ಪೋಯೆಪ್ಪತಯ್ದುಂ.

*ಚಂದ್ರನು ಎರಡಾವೃತ್ತಿಯಿವೆ. †ಇಲ್ಲಿ ಎರಡು ನಕ್ಷತ್ರಗಳು (ಅಭಿಜಿತ್ತು ಸೇರಿ) ಬಿಟ್ಟುಹೋಗಿವೆ.

ಕಂ|| ಕೃತ್ತಿಗೆ ಗಭಿಜೆಗೆ ಜ್ಯೇಷ್ಠೆಗೆ |
ಚಿತ್ರೆಗೆ ಮೃಗಶಿರೆಗೆ ಶತಪಿಶಾಖೆಗೆ ಕೇಳ ||
ಯ್ವತ್ತು (೫೦) ಧನಿಷ್ಠೆಗೆ ಗುಣಿಯಿಪು |
ದೆತ್ತಂ ನೀಂ ನೂಱಮೂವತಯ್ದಂ (೧೩೫) ಱಟ್ಟ || ೩೧ ||

ಉತ್ತರಷಾಢಕ್ಕಂತ |
ಯ್ವತ್ತಯ್ದಂ (೫೫) ವೊಂದುಗುಂದಿದಿನ್ನೂಱಂ (೧೯೯) ಕೊ ||
ಳ್ಳತ್ತಪಱಿೊಳಯ್ದು ಗುಂದಿಸು (೧೯೪-೧೯೫) |
ವೃತ್ತಭುಜಾ ಪೂರ್ವಷಾಢೆಕಿವು ಗುಣಕಾರಂ || ೩೨ ||

ಉತ್ತರೆ ಮಘೆ ಪೂರ್ವೆಗ ಮೆಸೆ |
ವುತ್ತರಭಾದ್ರಕ್ಕೆ ಪೂರ್ವಭಾದ್ರೆಗಮುಱ್ ಕೇ ||
ಳ್ಪತ್ತು ಕಡೆಯಾಗಿ ಯಿನ್ನೂಱು |
[1]ಪತ್ತಂ ಮಘೆಸಹಿತ(ಮೆಂತು) ವೊಂಭೈನೂಱಂ || ೩೩ ||

ಮಾರುತ ವಿಶಾಖೆ ರೋಹಿಣಿ |
ಗಾವರಿಸಿದ ನೆಣಿಸಿಕೊಳ್ಗೆ ನೂಱಯ್ವತ್ತಂ (೧೫೦) ||
ಭಾವಿಸದ(ಸುಗ)ಸುರಾಥೆಗೆ ನೀ |
ನೀವಿಧದಿಂ ದೆಣಿಸಿಕೊಳ್ಗೆ ನೂಱಯ್ವತ್ತಂ || ೩೪ ||

ಮನುಚರಿತ ಮೂಲಕಱುವ (೬೦) |
ತ್ತನೆ ಕೊಳ್ವುದು ತಪ್ಪದಿಪ್ಪತ್ತೇೞುಂ ದಿವಸ ||
ಕ್ಕನುಪಮದಂ ಗುಣಕಾರಂ |
ಆನುನಯದಿಂ ತಪ್ಪದೆಂದು ಭಾವಿಸು ಮಾಚಾ || ೩೫ ||

(ಇಂತು ಮತ್ತೂರ್ವಾಚಾರ್ಯಮತದ ನಕ್ಷತ್ರಗುಣಕಾರಂ)

೧೦. ರಾಶಿ ಗುಣಕಾರಂಗಳ್

ವ|| ಇನ್ನು [2]ರಾಶಿಗುಣಕಾರಮಂ ಪೇೞ್ವೆಂ—

ಕಂ|| [3]ಮೃಗಪತಿಗೊಂಬತ್ತಂ (೯) ಕ |
ನ್ಯೆಗೆ ಪತ್ತು (೧೦) ಚಾಪಕುಂಭಕಂ ತೊಂಬತ್ತಂ (೯೦) ||
ಬಗೆಗಿಪ್ಪತೊಂದು ಕಡೆಯೊಳ್ |
ಸೊಗಯಿಸಿ[4]ಕೊಳ್ (೧೨೧) ನೂಱನೆಂದನರ್ಹದ್ದಾಸಂ || ೩೬ ||

ವೃಷಮೇಷ ಮಿಥುನಕರ್ಕಟ |
ಝಷಮಕರಂ ತುಲೆಗ ಮುಱಿದುನೂರಯ್ವತ್ತಂ (೧೫೦) ||
ಝಷಮೇಷಾಂತಂ ರಾಶಿಗೆ |
ವಿಶೇಷದಿಂ ಧ್ರುವಮುಮಕ್ಕುಮಿಾಕ್ರಮದಿಂದಂ || ೩೭ ||

(ಇಂತು ರಾಶಿಗುಣಕಾರಂಗಳ್)

---

1 ಪತ್ತಂ. 2 ರಾಶಿಯ ಗುಣಾಕಾರಕ್ಕೆ. 3 ಮೃಗಪತ್ತಂ (೧೦). 4 ಕೊಳು ನೂಱಂ.

೧೧. ಗ್ರಹ ಗುಣಕಾರಂ

ಕಂ|| ಸಲೆ ನೂಱುಮೂವತಯ್ದುಂ (೧೩೫) |
ಬಿಸಜಸಖಂಗಿಂದುಗಂತೆ ಕೊಳ್ಳ(ಂಡ)ಱುವತ್ತುಂ (೬೦) ||
ಕುಲಿಶಿಗುರು ಗಯ್ವತಯ್ದುಂ (೫೫) |
ದಲಘು ಭುಜಾ ದೈತ್ಯಮಂತ್ರಿಗೆಪ್ಪತ್ತಯ್ದುಂ (೭೫) || ೩೮ ||

ಮಂದಂಗಱುವತ್ತಯ್ದರನಿ (೬೫) |
ಗೆಂದುಂ ತೊಂಭತ್ತು ನೆಗಲ್ದ ಗುಣಕಾರಂಗಳ್ ||
ಎಂದವಧಾರಿಪುದಿ(ದ)ರ್ಘಂ |
ಕಂದದದೆಂದಂದು ವಿನುತಗುಣಕಾರಂಗಳ್ || ೩೯ ||*

(ಇಂತು ಸರ್ವಮತ ನಕ್ಷತ್ರರಾಶಿಗ್ರಹ ಗುಣಕಾರಂಗಳ್)

೧೨. ಅರ್ಘಖಂಡಂ

ವ|| ಇನ್ನು ಅರ್ಘಖಂಡ ಪ್ರಮಾಣಮಂ ಪೇೞ್ವೆಂ—

ಕಂ|| ಎಳ್ಳವರೆ ತೊಗರಿ ನೆಲ್ ಪುರು |
ವಳ್ಳಿ ಪೆಸರ್ಗಡಲೆಯುದ್ದು ಗೋದುವೆ ಜೋಳಂ ||
ತೆಲ್ಲ ನಳವಡಿಗೆ ರಸಮಿವು(ವ) |
ನುಳ್ಳರ್ಘಮನಱಿದು ನೆಱೆಯೆ ಭಾವಿಸು ಮಾಚಾ || ೪೦ ||

ಕಿಱುಸುಗ್ಗಿಯಂದಿನರ್ಘಮ |
ನಱಿತ[ತಿ] ರೇಕದಿಂದ ವೊಂದುವರುಷಂ ಬರೆಗಂ ||
ಮ(ತು)ಱಿಯದೆ ಬ(ಬೆ)ಱ(ರ)ದಿರ್ದಂತವ |
ನಱಿವುದು ನಕ್ಷತ್ರರಾಶಿಯಿಂ ಗ್ರಹಗಣದಿಂ || ೪೧ ||

ಉಡುರಾಶಿಯ ಗುಣಕಾರವು |
ನೊಡವಿರ್ದಾ ಗ್ರಹಮುನಱಿದು ಯೆರಡುಂ ಪ್ರತಿಮಾ ||
ಡಡಿಯಣ ರಾಶಿಯನೀ(ವು) ಉದು(ಡು) |
ಸೆಡೆಯದೆ ವೊಂದು ಚಿತ್ರದರ್ಘಂ ಧ್ರುವದಿಂ || ೪೨ ||

ನೀಡಿರದೆ ಪಡೆವ ಲಬ್ಧಂ(ತಿ) |
ಗೂಡುಗೆ ತದ್ಗ್ರಹಮುನದಱೊಳೂರ್ಧ್ವಪ್ರತಿಯೊಳ್ ||
ನೋಡಿ ತೆಗೆ ಕಾಲ [1]ಮುಟಿದವ |
ಗಾಢಗುಣಾ ನಾಲ್ಕಱಿಂದೆ ತೆಗೆದೊಡೆ ಬಱಿಯುಂ || ೪೩ ||

ಮತ್ತವ ನಾಲ್ಕಱಿನಿಱಿದುವ |
ನೆತ್ತುಗೆ ಮಾನಂಗಳಕ್ಕು [2]ವಿಮಾಕ್ರಮದಿಂದಂ ||
ಮತ್ತಿನ ಧಾನ್ಯಂಗಳುಮಂ |
ವೃತ್ತಭುಜಾಂತರ್ಘಮೆಂದು ಮಾಚಿಗೆ [3]ಪೇೞ್ದಂ || ೪೪ ||

1 ಮುನೀವಗಾಢಂ. ಮಿಶ್ರ ಕ್ರ. 3 ನೆಗಲ್ದ.
*ಇಲ್ಲಿ ಬುಧ ಚಂದ್ರ—ಈ ಗ್ರಹಗಳ ಗುಣಕಾರವನ್ನು ಹೇಳುವ ಕಂದವು ಗಳಿತವಾಗಿದೆ.

ಕಂ|| ಗ್ರಹದುದಯಮಸ್ತಮಾನಂ |
ಗ್ರಹಯುದ್ಧಂ ಪೌರ್ಣಮಾಸೆಯಮಮಾಸೆ[1]ಗಳೊಳ್ ||
ಗ್ರಹವಕ್ರೋತ್ಪಾತಂಗಳ್ |
ಗ್ರಹದಿಂದರ್ಘಾಧಿಕಾರಮಂ ನೋಟ್ಕೆ ಬುಧರ್ || ೪೫ ||

ಪಾಪಾಂತರ್ದಶದೋಷಂ |
ಪಾಪಗ್ರಹನಿಚಯಮುಟಾದ ನಿಯಮಿಪ ಪದದೊಳ್ ||
ವ್ಯಾಪಿಸೆ(ಪ) ಸಂಕ್ರಮಮರ್ಘಮ |
[2]ನೀ ಪರಿಚಿತಮಾಗಿ(ಗ) ನೋಡಿ(ಡ) ಅಟ್ಟಿನ ಮತದಿಂ || ೪೬ ||

ಶುಭನಿಲಯಂ ಶುಭದಿವಸಂ |
ಶುಭಗ್ರಹಂ ಮಿತ್ರಯುಕ್ತಮುಂ ಸಂಕ್ರಮಣಂ ||
ಪ್ರಭವಿಸಿದೊಡೆ ಕಂಡರ್ಘಂ |
ಶುಭದಮುಮಾಸ್ಥಿತಿಯೊಳಕ್ಕುಮರ್ಹದ್ದಾಸಾ || ೪೭ ||

ತನ್ನ ಗೃಹಮುಚ್ಚನಿಲಯಂ |
ತನ್ನಂಶಂ ಕೂಡಿದರ್ಘಮಂ ದ್ವಿಗುಣಿಸಿಕೊಳ್(ಳು) ||
ಬಿನ್ನಣಮೇನತ್ಯುಚ್ಚದೊ |
ಳುನ್ನತಗುಣ ಪಡೆದ ಲಬ್ಧಮಂ ತ್ರಿಗುಣಿಸಿಕೊಳ್ || ೪೮ ||

ನಿರತಿಶಯಮೆನಿಸಿದರ್ಘಮ |
ನೆರೆ(ನಿರ)ದೆಡೆಯೊಳ್ ಪ್ರತಿಯನಿಟ್ಟೊಡಂತಾ ಪ್ರತಿಯಂ ||
ಪರಿವಿಡಿದಪ್ಪದೆ ಶುಕ್ರನ |
ಚರಿಯಿಪ ಸನ್ಮಾ[3]ರ್ಗ ಋಕ್ಷೆಯಂ ಚರಿಯಿಸುಗುಂ || ೪೯ ||

ನಾಲ್ಕೆಂಬ ವೀಥಿಯೆಡೆಯೊಳ್ |
ನಾಲ್ಕಱ ಮೂಱಱೊಳೆ ಮೂಱಱಿಂದಂ ಕೊಳ್ ನೀಂ ||
ಸಿಲ್ಕಿಲ್ಲದೆ ಕೂಡಯ್ದಂ |
ಬಲ್ಕಣೆ ನೀನಯ್ದುಗೆಯ್ದು ಕಳೆ ಪಡೆದನಿತಂ || ೫೦ ||

ನೆಗಲ್ದಮಘಾ(ಖಾ) ಪಂಚಕದೊಳ್ |
ಭೃಗುತನಯಂ ಮೂಡ ಪಟ್ಟು ಪಡವಲ್ ಮೂಡಲ್ ||
[4]ಬಗೆಗಿಡದಱಿಕೊಳ್ ನೀಂ ಕೊಂ |
ಡೊಗೆದೊಡೆ ಲಬ್ಧಿ ಮೇಗೆ ಕೂಡಿದಂದದುಮರ್ಘಂ || ೫೧ ||

ಸ್ವಾತಿ ತ್ರಿಕದೊಳ್ ಭೃಗುಜಂ |
ಮಾತೇಂ ಮೂಡಸ್ತಮಿಪ್ಪೊಡಂ ಪಡುವಲತಿ ||
ಪ್ರೀತಿಯು(ತಂ) ಮೂಡುವೊ(ಡಲೊ)ಡಂ |
ಖ್ಯಾತಿ ತ್ರಿಕದೆತ್ತಿ ಪ(ನ)ಡೆದುಮಂ ತತ್ಪ್ರತಿಯೊಳ್ || ೫೨ ||

---

1 ಯೊಳಂ. 2 ನೀ ಪೆಚ್ಚದೆ ನೋಡಿ ಅಟ್ಟಗಾಂಕನ. 3 ರ್ಗಮಂಚರಿ. 4 ಬಗೆದೊಡದ ಕೊಳ್ ನೀಂ ಕೊಂಡೊಡ ಲಬ್ಧಿಮೇಗೆ, ಲಬ್ದಂ ಕೂ.

ಕಂ॥ ನುತಜ್ಯೇಷ್ಠಾ ಪಂಚಕದೊಳ್ ।
ಸಿತನಪರದೊಳಸ್ತಮಿಪ್ಪೊಡಂ ಮೂಡಲ್ ಸ ॥
ನ್ನುತನುದಯಮುಪ್ಪೊಡಂ ಯ ।
ತ್ನತೆಯಿಂದಂ ಕೊಂಡು ಕೂಡೆ(ಡು) ನೀಂ ತತ್ಪ್ರತಿಯೊಳ್ ॥ ೫೩ ॥

ಎರಡುಂಗ್ರಹವೊಂದೆಡೆಯೊಳ್ ।
ನೆರೆದಿರ್ದೊಡೆ ಮಱಿವುದರ್ಘಮಂ ಕೂಡೆ ಸಮಂ ॥
ತೆರಡಱೊಳಗಿರ್ದ ಲೆಕ್ಕವ ।
ಧರೆಯೊಳೆ ನಿಂದರ್ಘಮಕ್ಕುಮರ್ಹದ್ದಾಸಾ ॥ ೫೪ ॥

(ಇಂತು ಅರ್ಘಖಂಡಂ)

೧೩. ಸಂಕ್ರಾನ್ತಿ ಫಲಂ

ವ॥ ಇನ್ನು ಸಂಕ್ರಾನ್ತಿ ಫಲಮಂ ಪೇೞ್ವೆಂ*—

ಕಂ॥ ಬಾಲವಬವ ವಿಷ್ಟಿಯೊಳಂ ।
ಮೇಲೆನಿಸುವ ವಣಿಜೆಯೊಳಗೆ 1 ಕುಳಿಕಂ ಧ್ರುವ ॥
ಕಾಲವದಱೊಳೆ ಕಂ(ಬಂ)ಡಿ(ದಿ)ರ್ಕುಂ ।
ಲೀಲೆಯ ತೃತ(ತು)ಲೆಯುಗರಿಜೆಯೊಳ್ ಪ(ಪಿ)ಟ್ಟಕರ್ಕಂ ॥ ೫೫ ॥

ನಿರುಪಮ ವಿಶಾಖೆ ಮೂಱು ।
ತ್ತರೆ ರೋಹಿಣಿಯದಿತಿಯೆಂಬಿವಾಱುಂ ವರ ಖ ॥
ಕ್ಷೆಗೆ ನೆಗಟ್ದ ನಾಲ್ವತ್ತಯ್ದಾ ।
ವರಿಸೆ (೪೫) ಮುಹೂರ್ತಮೆನೆ ತಪ್ಪದೊಳ್ಪಿನ ಜಟ್ಟಾ ॥ ೫೬ ॥

ಅನುರಾಧೆ ಚಿತ್ರೆಮಘೆ ಯ ।
ಶ್ವಿನಿಹಸ್ತಂ ಶ್ರವಣಪುಷ್ಯಮುಂ ರೇವತಿ ಸಂ ॥
ದನಲಂ ಧನಿಷ್ಠೆ ಮೂಲಮಿ ।
ವಿನಿತುಂ ತ್ರಿಂಶನ್ಮುಹೂರ್ತಮಂ (೩೦) ನೆಱೆಯಾಳ್ಗುಂ ॥ ೫೭ ॥

ಸಂದಿಂದ್ರೆ ಜ್ಯೇಷ್ಠೆ ಭರಣಿಯ ।
ನಿಂದಿತಮಾಶ್ಲೇಷೆ ಶತಭಿಷಾ ಸ್ವಾತಿಯು ಮೊಂ ॥
ದೊಂದು ಪದಿನಯ್ದು (೧೫) ಮುಹುರ್ತ ।
ಮೆಂದಱಿವುದು ನೆಱೆಯೆ ಪೇೞ್ದನೊಳ್ಪಿನ ಜಟ್ಟಂ ॥ ೫೮ ॥

ಕುಂದುವ ಪೆರ್ಚುವ ಸಮನೆನಿ ।
ಪಂದದುವಾ(ಕಲ)ಗ್ದಷ್ಟಿಕರದಿನದೊಳ್? ವಿದ್ವ ॥
ನ್ಮಂದಿರದೊಳ್ ನಭದಲ್ಲಿರ ।
ದೊಂದಿದ ಸಂಕ್ರಮಣಮರ್ಘಮಾಸ್ಥಿತಿಯಕ್ಕುಂ ॥ ೫೯ ॥

1 ಮಲ್ಲಿಕ್ಕುಂ.

* ಇಲ್ಲಿಯೂ ನಕ್ಷತ್ರರಾಶಿ ಗ್ರಹ ಗುಣಕಾರ ಹೇಳಿದೆ – ಇದು ಮತ್ತೊಬ್ಬಾಚಾರ್ಯರ ಮತವಿರಬಹುದು.

ಕಂ|| ಕೃತ್ತಿಗೆ ಮೃಗಶಿರೆಯಶ್ವಿನಿ |
ಚಿತ್ತೆ ಕೃತಾಂತಕ ಧನಿಷ್ಠೆ ಶತಭಿಷೆ ಮಘೆಯೆಂ ||
ಬುತ್ತಮರಿಕ್ಷೆಗೆ ಗುಣಿಯಿಪು |
ದೆತ್ತಂ ನೀಂ ನೂಱಱುವತಯ್ದಂ (೧೩೫) ಅಟ್ಟಾ || ೬೦ ||

ಉತ್ತರೆಗೆಸೆವಿನ್ನೂರ |
ಯ್ವತ್ತೇೞಾ (೨೫೭) ಪೂರ್ವಗದಱೊಳೇಕಂಗಳಿಗ ||
ಯ್ವತ್ತಾಗಡ (೨೫೬) ಹಸ್ತಜ್ಯೇಷ್ಠೆಗೆ |
ವೃತ್ತಭುಜಾ ಪುಷ್ಯಕೆಪ್ಪತಯ್ದು (೭೫) ಗುಣಂಗಳ್ || ೬೧ ||

ಅನುರಾಧೆಗೆ ನೂಱಿಪ್ಪ |
ತ್ತನೆ (೧೨೦) ಕೊಳ್ವುದು ನೆಟ್ಟನೆರಡುಃಭಾದ್ರಪದಕ್ಕಂ ||
ವನಜಜವಿಶಾಖೆಗಂ ಮ |
ತ್ತನುನಯ ನೂರಯ್ದು (೧೦೫) ನಱಿದುಕೊಳ್ ಗುಣಕಾರಂಗಳ್ || ೬೨ ||

ಪಿರಿಯುತ್ತರೆಗಯ್ನೂರ (೫೦೫) |
ಯ್ದರಡುತ್ತರೆಯಾ(ಮಾ)ಗಿ ಯಾರ್ದ್ರೆಗಂ ನೂಱಕ್ಕುಂ ||
[1]ವರಗುಣ ಶ್ರವಣಸ್ವಾತಿಗೆ |
ದೊರೆವೆತ್ತಱುವತ್ತು (೬೦) ನೆಗಟ್ದ ಗುಣಕಾರಂಗಳ್ || ೬೩ ||

ರೇವತಿಗಕ್ಕುಂ ನೂರ (೧೦೫) |
ಯ್ದಾ ವರಸಿದ ದಿತಿತೋಯರಿಕ್ಷೆಗಮಿನ್ನೂ ||
ರಾವಗೆ (೨೦೦) ಫಣಿಗಂ ಕೊಳ್ವುದು |
ಭಾವಿಸಿ ನೀಂ ನೂಱನಾಲ್ವತಯ್ದಂ (೧೪೫) ಅಟ್ಟಾ || ೬೪ ||

(ಇವು ನಕ್ಷತ್ರ ಗುಣಕಾರಂಗಳ್)

೧೪. ರಾಶಿಗುಣಕಾರಂಗಳ್

ವ|| ಇನ್ನು ರಾಶಿ ಗುಣಕಾರಂಗಳಂ ಪೇೞ್ವೆಂ—

ಕಂ|| ಇನ್ನು [2]ತೊಲೆ ಮಕರ ಮೀನಕೆ |
ಸನ್ನುತ ಮೇಷಾದಿ ನಾಲ್ಕು ರಾಶಿಗೆ ಗುಣಿಸಲ್ ||
ಬಿನ್ನಣದಿನೆಂಟುಗುಂದಿಸು |
ಮನ್ನಿಸಿಕೊಳ್ ನೂಱನಾಲ್ವತಂ (೧೪೦) ಬುಧಮಿತ್ರಾ || ೬೫ ||

ಧನುಸಿಂಹಂಗಳ್ಗೆಪ್ಪ |
ತ್ತನೆ (೭೦) ಕೊಳ್ವುದು ಕುಂಭಕಂತೆ ವೃಶ್ಚಿಕಕಂ ನೀಂ ||
ಮನವೊಸೆದುಂ ನೂಱಿಪ್ಪತ (೧೨೦) |
ನನುನಯಗುಣಕಾರಮಾಗಿ ಮಾಳ್ಪುದು ಅಟ್ಟಾ || ೬೬ ||*

(ಇಂತು ರಾಶಿಗುಣಕಾರಂಗಳ್)

---

1 ವರುಣಗುಣ. 2 ತೊಲೆ ಮಕರಂ ಮೀನಕ್ಕಂ ಸನೆನುತ.

*ಇಲ್ಲಿ ಉಳಿದ ಐದು ಗ್ರಹಗಳ ಗುಣಕಾರ ಹೇಳುವ ಕಂದವಿರಬೇಕು.

೧೫. ಗ್ರಹಗುಣಕಾರಂಗಳ್

*ಕಂ|| ಸಲೆ ನೂಱುಮೂವತಯ್ದಂ (೧೩೫) |
ಜಲರುಹಮಿತ್ರಂಗೆ ಸಸಿಗಮಿನ್ನೂರೇೞುಂ (೨೦೭) ||
ಕುಲಿಶಿಗುರುಗಿರ್ಪತಯ್ದಂ (೨೫) |
ಪಲವುತತೆಱದಾಗ್ರಹಕ್ಕೆ ಕೊಳ್ಗಱ.(೬೦)ವತ್ತಂ || ೬೭ ||

(ಇಂತು ಗ್ರಹ ಗುಣಕಾರಂಗಳ್—ಅರ್ಘಖಂಡಂ)

೧೬. ಕೂರ್ಮಚಕ್ರಂ

ವ|| ಇನ್ನು ಕೂರ್ಮಚಕ್ರಮಂ ಪೇೞ್ವೆಂ—

ಕಂ|| ಈ ಗುಣಕಾರಂ ಕೂರ್ಮವಿ |
ಭಾಗಕ್ಕೆಸೆದಿರ್ಕುಮಲ್ಲಿ ಭಾವಿಸಿ ಪೇೞ್ದಂ ||
ದಾಗಮುಕೋವಿದ ನೆನಿ(ಕುಂ) ಸುಗು |
ಮಾಗಾರ್ಗ್ಯವರಾಹಮಿಹಿರರಿಂದೀ ಧರೆಯೊಳ್[1] || ೬೮ ||

ಜಾಱಿೞಂ ಕೃತ್ತಿಗೆಯಾದಿಯ |
ಮೂಱುಂ ನಕ್ಷತ್ರಮೆಸೆವ ಕೂರ್ಮನ ಬೆನ್ನೊಳ್ ||
ಕೀೞು ನೆಲಸಿರ್ಕುಮವಱೊಳ್ |
ತೋಱುವ ಶನಿ[2]ಯಲಿವ ನಾಡ ಪೆಸರಂ ಪೇೞ್ವೆಂ || ೬೯ ||

†ಮ|| ಕುರುಶಾ ಕೈಕೆಯ ಪಾರಿಯಾತ್ರ ಮಿಥಿಳಾ ಪಾಂಚಾಳ ಗಂಗಾತಟಾಂ |
ತರ ಕೌ[3]ಶಾಂಬಿ ಸಕಂಭಿ ನಾಗಪುರದಿಂದೊಂದಿರ್ದಹಿ[3]ಚ್ಛತ್ರದಿಂ ||
ನಿರುತಂ ಪಾಟಲಿಪುತ್ರದಿಂದಮೆಸೆದಿರ್ದಾ ಮತ್ಸ್ಯದೇಶಕ್ಕೆ ತ |
ಸ್ಕರರೋಗಾದಿ ಭಯಂಗಳಂ ಜನಿಯಿಕುಂ ಪಂಕೇಜ[4]ಮಿತ್ರಾತ್ಮಜಂ (ಜಾ) || ೭೦ ||

ಕಂ|| ನೆಗೞ್ದ ದ್ವಾದ್ರಾದಿತ್ರಿಕ |
ಭಗಣಂಗಳ್ ನೆಱೆಯೆ ಕೂರ್ಮ[5]ಣೇನ್ಯ(ಣಾಸ್ಯ)ದೊಳಂ ||
ಬಗೆದು ತಿಳಿಯ(ವ)ಱಿಯೆ [6]ಭಾವಿಸು |
ನೆಗೞ್ದ ಪ್ರ್ಪದು ಪೂರ್ವದೇಶದೊಳ್ ಭಯಮುಕ್ಕುಂ || ೭೧ ||

ಸ್ರ|| ಸ್ತ್ರೀರಾಜ್ಯಂ ಶೂರ್ಪವಂಗಂ ಮಗಧಮುಹಿತಳಂ [7]ಪಾಂಡ್ಯ ಸೌರಾಷ್ಟ್ರ ಮುಳ್ಕಂ |
ಪಾರಿಷ್ಕಂ [8]ಪಾ(ಸಾ)ರಿಣಾರ್ಯಂ ಖಚರಸಹಿತ ಮಿನ್ನೊಂದು ಮಾವಲ್ಕಲಾಖ್ಯಾ ||
ಭೀರಂ ಚಂದ್ರಾಂಗದೇಶಂ ಜಲದೆ ಸುರಸರಿ[9]ತ್ಸಾರ ಕೂಟಾಂತರ ಪ್ರಾ |
ಸಾರಂ ನೀರೇಜ ಮಿತ್ರಾತ್ಮಜನ ದೆಸೆಯೊಳಂ ಕ್ಷುದ್ಭಯಂ ತಿಣ್ಣಮಕ್ಕುಂ || ೭೨ ||

---

1 ಅರ್ಘಖಂಡಂ ಸಮಾಪ್ತಂ, ಕೂರ್ಮಚಕ್ರಂ...... 2 ಯನಲ ನಾಡ. 3 ಕ್ಷೇತ್ರದಿಂ. 4 ಮಿತ್ರಾಂ ಬುಜಾ. 5 ಮಣಂ ನ್ಯಾಂದುಃಳೋತೆಂ. 6 ಭಾನು. 7 ಪಾಂಡ್ಯದೇಶಂ ಸೌ. 8 ಪರಿಣಾರ್ಯಂ. 9 ತ್ಸ್ಯಾತಿಶ ಕೂಟಾಂತರ ಸ್ಥಾಂ.

*ಇಲ್ಲಿ ಮೂರು ಗ್ರಹಗಳ ಗುಣಕಾರ ಮಾತ್ರವಿವೆ, ಉಳಿದುದು ಗ್ರಹಗಳದು ಕೈಬಿಟ್ಟುಹೋಗಿದೆ.

†ದೇಶವಾಚಕ ಶಬ್ದಗಳಲ್ಲಿ ಹಲವು ಅಶುದ್ಧಪಾಠಗಳಿವೆ.

ಕಂ॥ ಸಂದಾಶ್ಲೇಷಾತ್ರಿತಯಮು |
ಮೆಂದುಂ ಕಚ್ಛಪನ ಬಲದ ಕೆಯ್ಯೊಳ್ ನಿಲ್ಕುಂ ||
ಮಂದನವಱೊಳಗೆ ನಿಲೆ ಪೊ |
ಲ್ಲೆಂದುಂ ಭಯಮಕ್ಕುಮೆಂದ ದಹನನ ದೆಸೆಯೊಳ್ || ೭೩ ||

ಚಂ॥ ಅನುಪಮ ಕಾನ್ತಿ[1]ವೆನ್ನಿಮದಿ........ ಕಾಶ್ಮೀರ [2]ಪಾರ್ಯಂತ ಸಂ |
ಜನಮ(ರು)ತ ಪೌಗುಳುತ್ತಿ ಪುರವೇಣಿ ನಿಜಾಂತರಮೆಂಬ ದೇಶಮುಂ ||
ಶನಿಭುಜಗಾದಿ ಮೂಱು ಭಗಣಂಗಳೊಳಿರ್ದೊಡೆ ರಾಜಬಾಧೆಯಿಂ |
ನಲುಗು ಮಹೋಘಮೆಂಬುದಿದು ಗಾರ್ಗ್ಯವರಾಹ ಮುನೀಂದ್ರ ಭಾಷಿತಂ || ೭೪ ||

ಕಂ॥ ಉತ್ತರೆ ಹಸ್ತಂ ಚಿತ್ತೆಗ |
ಳಿತ್ತಂ ಕಚ್ಛಪನ ಬಲದ ಮಗ್ಗುಲೊಳಿರ್ಕುಂ ||
ಮತ್ತವಱೊಳ್ ಶನಿ ನಿಲೆ ಯಾ |
ಪತ್ತಂ ದಕ್ಷಿಣಮಹೀತಳಕ್ಕಂ ಮಾಳ್ಕುಂ || ೭೫ ||

ಚಂ॥ ಎಸೆಕದವಂತಿ ಕಾಂಚಿ ಸಿಬಿರಂ ವನವಾಸಿ ವಿದರ್ಭ ಸಿಂಹಳಂ |
ಮಸಗ(ವ) ವತ್ಸ ಭೀಮ(ರ)ಜನ ಸನ್ಮದಯಾಪುರಿಯೆಂಬ ದೇಶದಿಂ ||
ದೆಸೆದಿರೆ ದಕ್ಷಿಣಾಂಬುಧಿವರಂ ದಿನಪಾತ್ಮಜನುಗ್ರಕೋಪದಿಂ |
ಪಸವ ಭಯಂಗಳಂ ದಹನಬಾಧೆಯನದ್ಭುತಮಾಗೆ ಮಾಡುಗುಂ || ೭೬ ||

ಕಂ॥ ಕೂರ್ಮನ ಬಲಗಾಲಂ ಸಲೆ |
ನೆರ್ಮಿರ್ಕ್ಕುಂ ಸ್ವಾತಿಯಾದಿಯಾಗಿ ಮೂಱುಂ ಭಗಣಂ ||
ಪೆರ್ಮಾತಿನ ನೈಋತಿಯೊಳ್ |
ನಿರ್ಮಿಸುಗುಂ ನಿರುತಮೆಸೆವ ದೋಷಾವಳಿಯಂ || ೭೭ ||

ಉ॥ ಕೊಂಕಣ ವೈಜಯಂತಿ ಚರುವಚ್ಛಸ ನಾಸಿಕ ಗುಹ್ಯಮೂಲಮುಂ |
ಬಿಂಕದ ಕೂರ್ಮನಿರ್ಜರ ಮಹೀತಳ ವಿಶ್ರುತ ನರ್ಮದಾಖ್ಯಮು ||
ತ್ರಂಕದ ರಾಜಬಾಧೆಯ ಘನಾಗಮಮಾಪರ ವಿಡ್ವ(ಡ್ಢ)ರಂಗಳಿಂ |
ದಂಕಮಮಾಗುರುಂ ನಿರುತಿಯತ್ತಣ ದೇಶದಿನಾತ್ಮಜಾತನಿಂ || ೭೮ ||

ಕಂ॥ ಸಂದಿರ್ದ ಕೂರ್ಮಪು(ಪ್ಪ)ಚ್ಛದೊ |
ಳೊಂದಿರ್ಕುಂ ಜ್ಯೇಷ್ಠೆ ಮೂಲ ಪೂರ್ವಾಷಾಢಂ ||
ಮಂದನವಱೊಳಗೆ ಚರಿಯಿಪೊ |
ಡೆಂದುಂ ತತ್ಪಶ್ಚಿಮಾಶೆಗತ್ಯುಗ್ರಕರಂ || ೭೯ ||

ಉ॥ ಚೇರ ಸುರಾಷ್ಟ್ರ ರಾಮಕರ ಯಾಮುಸ(ನ) ನಂದ[3]ಸುಪುಂವಿ ಮತ್ಸ್ಯಪಿ |
ಚೇರಸಿನಿಂದಯಚ್ಛಯಮುನಾತಟ ವಚ್ಚ(ತ್ಸ)ಳಮೆಂಬ ದೇಶಮುಂ ||
ಧಾರಿಣಿ ಕೀತ್ಕ(ಕ)ಟಾಂತರ(ದ)ಲರ್ಕಸುತಂ ನಿಲೆ ಶಸ್ತ್ರಬಾಧೆಯಿಂ |
ಮಾರಿಯನೊಂದುಮಿಲ್ಲದಟಿಗುಂ [4]ವರಪಿಂಗಳಗಾರ್ಗ್ಯ ಭಾಷಿತಂ || ೮೦ ||

1 ವೆನ್ನಿದದು. 2 ಪಾರಿಯಾತ್ರಸನ್ನುತಪಾಗ. 3 ಸುಪೂ ಇಮುಚ್ಛಪಿ ಚೀರನಿಂದಚ್ಛಯಮುನಾ. ಜಾಬಾಚೇಂಗಳ ಗಾರ್ಗ್ಯ. 4 ಪ್ರಾಸದೋಷವಿದೆ.

ಕಂ|| ಉತ್ತರಷಾಢಾಶ್ರವಣಂ |
ಮತ್ತಂ ಸೊಗಯಿಪ ಧನಿಷ್ಠೆ ಯೆಡಗಾಲೆಡೆಯೊಳ್ ||
ಮತ್ತಮವಱೊಳಗೆ ಶನಿ ನಿಲೆ |
ವೃತ್ತಭುಜಾ ಪವನದಿಕ್ತಟಾಂತರವಕ್ಕುಂ || ೮೧ ||

ಶತಭಿಷಗಾದಿಯ[1] ಭಗಣ |
ತ್ರಿತಯಂ ಕಚ್ಛಪನ ವಾಮಪಾರ್ಶ್ವದೊಳಿರ್ಕುಂ ||
ಸತತಮವಱೊಳಗೆ ಶನಿ ನಿಲ |
ಉತುಪಾತಂ ಬಡಗನೆಲಕೆ ಪಲತೆಱನಕ್ಕುಂ || ೮೨ ||

ರೇವತಿಯಶ್ವಿನಿ ಭರಣಿಯು |
ಮಾವಗ(ಗೆ)ಮಕರಾಗ್ರದಲ್ಲಿ ನೆಲಸುಗುಮವಱೊಳ್ ||
ಭಾವಿಸು(ಸಿ) ಮಂದಂ ನಿಲೆ ಪೊ |
ಲ್ಲಾವಗ ವಿನಾಶಾನ್ಯದತ್ತಣುರ್ವರಿಗೆಲ್ಲಂ || ೮೩ ||

(ಇಂತು ಕೃತ್ತಿಗೆಯಾದಿಯಾಗಿ ಮೂಱು ಮೂಱು ನಕ್ಷತ್ರಂಗಳಲ್ಲಿ (ಕೂರ್ಮ ನಂಗಂಗಳಲ್ಲಿ) ಶನಿ ಚರಿಯಿಸುವ ಫಲಂ)

ಅಕ್ಕರಂ|| ಮೂಱು ನಡುಬೆನ್ನೊಳಂ ಮೂಱಾನಾಭಿಯೊಳ್ ಮೂಱುಂದಕ್ಷಿಣಹಸ್ತದೊಳ್ |
ಮೂಱುಂ ಬಲದ ಬರಿಯೊಳ್ ಮೂಱು ಪಿಂಗಾಲೊಳ್ ಮೂಱುಂ
ಪುಚ್ಛದಲ್ಲಿರ್ಪುವು ||
ಮೂಱೆಡದ ಕಾಲೊಳ್ ಮೂಱೆಡದ ಬರಿಯೊಳ್ ಮೂಱೆಡದ ಕೆಯ್ಯೊಳ್
ಮೂಱು ಕೃತ್ತಿಗೆಯಾದಿಯಾಗಿ ಕೂರ್ಮ(ರ್ಮಾ)ಂಗಳೊ(ದೊ)ಳ್ |
ತೋಱಿದ ನಕ್ಷತ್ರದೊಳುತ್ಪಾತಮಿರೆ ಪೇೞತ್ತಣ ನಾಡಿಂಗೊಳ್ಪಂ
ಬಿನ್ನಣ ಋಟ್ಟುಗಾ || ೮೪ ||

ಮಂ|| ನಡುಬೆನ್ನಿಂ ವದನಾಗ್ರದಿಂ ಬಲದಕೆಯ್ಯಿಂ ಮಗ್ಗುಲಿಂ ಪಾದದಿಂ |
ಪಡುವಲ್ ಕೂರ್ಮನ ಪುಚ್ಛದಂತೆಡದ ಕಾಲಿಂ ಮಗ್ಗುಲಿಂ ಹಸ್ತದಿಂ[ದೆಯ್ದೆ ಕೂ]||
ಡಿದ ಋಕ್ಷತ್ರಿತಯಂಗಳಿಂ ಕ್ರಮದಿನಾವೈಶ್ವಾನರಾ(ಕ್ನಾ)ಶಾದಿಯಂ |
ಪಡೆವಾತೇಂ ಶನಿಯುತ್ತಲಿದೊಡೆ ಮಹಾಕ್ಷುದ್ರಾಜಿ ಶಸ್ತ್ರಾಕುಳಂ || ೮೫ ||

(ಇಂತು ಕೂರ್ಮನ ಚಕ್ರಂ)

೧೬. ನಕ್ಷತ್ರಚಾರಂ

ಶನಿ ನಕ್ಷತ್ರಚಾರಂ (೧)

ವ|| ಇನ್ನು ಶನಿಯ ನಕ್ಷತ್ರಚಾರಮಂ ಪೇೞ್ವೆಂ—

ಕಂ|| ಸಂದೆಯಮಿಲ್ಲದೆ ಮಟಿಯಾ |
ದಂದು ಕರಂ ಬಿಡದೆ ಕಱೆದು ಧಾನ್ಯವ್ರಜಮುಂ ||
ಕುಂದದೆ ಧರೆ ಬೆಳೆದಿರ್ಕುಂ |
ಮಂದಂ ಬಂದೊಂದಿನಿಂದೊಡಾ(ಡಂ)(ದ)ಶ್ವಿನಿಯೊಳ್ || ೮೬ ||

1 ಷಮಾದಿ

ಚಂ|| ಧರೆ ಬೆಳೆಗುಂ ಸಮಸ್ತ ವರಧಾನ್ಯಚಯಂಗಳನರ್ಘಮೇಱುಗುಂ |
ಭರಣಿಯೊಳರ್ಕಜಂ ನಿಲೆಯೆ ಭತ್ತಮನಂಜದೆ ಕೊಳ್ವುದಂತ್ಯದೊಳ್ ||
ಕರಗುಗು(ರು) ಮರ್ಘಮಂದು ಬೆಳಸಿಲ್ಲದೆ ಪೆರ್ಚುಗುಂ ದಕ್ಷಿಣಾಪಥಂ |
ಸುರನದಿಯಿಂ ಸರಸ್ವತಿಯ ನರ್ಮದೆಯಿಂ ಬೆಳಸರ್ಘಮೇಱುಗುಂ || ೮೭ ||

ಕಂ|| ಕೃತ್ತಿಗೆಯೊಳ್ ಶನಿ ನಿಲೆ ಕಿಱು |
ಕಾರ್ತಿಕೆಯೊಳ್ ಕುತ್ತುಮಕ್ಕುಮಿಳೆಯುಂ ಬೆಳೆದಾ ||
ವರ್ತಿಸುಗುಂ ನಿಂದರ್ಘಂ |
ಚೈತ್ರಮಾಸದೊಳ್ ಕುಂದುಗುಂ ಧಾನ್ಯಚಯಂ || ೮೮ ||

ಚಂ|| ಕಡೆವೆಳಸಕ್ಕು ಮತ್ತೆರಡು ಕಾರ್ತಿಕೆಗಂ ಸಲೆಯರ್ಘಮಾಗಿಯುಂ |
ತೊಡೆಯನನಾಥನೆನ್ನದೆ ವಿವಾಹಮನಪ್ಪವರಲ್ಲಿ ಮೊಕ್ಕಳಂ ||
ತಡೆಯಣೆ ರೋಹಿಣೀಚಯದೊಳಂ ಶನಿ ನಿಂದೊಡೆ ನೋಡೆ ನಾಡೆಯುಂ |
ಜಡಮತಿಯಾಱು ಖಂಡುಗಮದರ್ಘಮ ನೋಡಿರೆ(ಲೆ) ಮಾಘಮಾಸದೊಳ್ ||೮೯||

ಕಂ|| ಸಲ್ಲಲಿತಮಾಗಿ ಮೃಗಶಿರ |
ದಲ್ಲಿಯೆ ಶನಿ ನೆಲಸಿ ನಿಂದೊಡಂ ಬೆಳಸಕ್ಕುಂ ||
ಮೆಲ್ಲನೆ ಚೈತ್ರಕ್ಕರ್ಘಂ |
ನಿಲ್ಲದೆ ಕೇಳಣ್ಣ ನಾಲ್ಕು ಖಂಡುಗಮಕ್ಕುಂ || ೯೦ ||

ಮ|| ಶನಿ ಬಂದಾರ್ದ್ರೆಯೊಳಿರ್ದ ಕಾಲಮನಿತುಂ ಭತ್ತಂಗಳಂ ಮಾಱುಗೊಳ್ |
ಪನಿಯಲ್ಪಂ ಸಮನಿಕ್ಕು ಮುಂದದನೆ ಕೇಳ್ ಧಾನ್ಯಾಂಗದೇಶಕ್ಕೆ ನ ||
ರ್ಮದ ಮೆಂದಿಂತಿವನಾಳ್ವ ಭೂಪತಿಗೆ ಕೇಡಂತೆಯುದ್ದುಗುಂ ನಿಶ್ಚಯಂ |
ಮುನಿವಾಕ್ಯಂ ಸಮನಿಕ್ಕುಮಿಂತು ತ್ರಿಕಳಿಂಗಾ(ಗ)ದೇಶಮಂ ನಿಶ್ಚಯಂ || ೯೧ ||

ಕಂ|| ಶನಿಯಿರೆ ಪುನರ್ವಸುವಿನೊ |
ಳನಿತುಂ ನಿಶ್ಚಯ[1]ದಿನರ್ಘಧಾನ್ಯಂ ಬೆಳೆಗುಂ ||
ಜನಕಂ ಬಡಗಣ ಕೌಶಲ |
ದವನೀಪತಿಯೆ ರುಜೆಯಿಂದೆ ಸಾಯ್ದುಗುಂ ದಿಟದಿಂ || ೯೨ ||

ಮಂಡಲವರ್ಷಂ ಪುಷ್ಯದೆ |
[2]ಚಂಡಕರ ಪ್ರಿಯಸುತನುಜನೊಸೆದಿದಾರ್ಗಳ್ ||
ಕೊಂಡುಂ ಮಡಗಿಡು ಭತ್ತಮ |
ಮಂಡಲದೊಳ್ ಪಡೆಯಲಾಱರೆಂದರ್ ಗಾರ್ಗ್ಯರ್ || ೯೩ ||

1 ಮಿರನ. 2 ಭಂಡಲರವಿ, ಚಂಡವರ ಪ್ರಿಯ.

ಮ||ಸ್ರ|| ಶನಿ ಬಂದಾಶ್ಲೇಷೆಯೊಳ್ ತಾನೊಸೆದು ನೆಲಸಿದಂದಣ್ಣಾ ಧಾನ್ಯಂಗಳೆಲ್ಲಂ |
ಮುನಿಯುಂ ಪೇಟ್ದಿಷ್ಟದಿಂದಂ ಬೆಳೆಗುಮತಿಶಯಂ ಕಾಲ[1]ಮಿನ್ನೊಳ್ಳಿತಕ್ಕುಂ ||
ವನಜಾಕ್ಷೀ ಸೌರಿಯಲ್ಲಿಂತಳರ್ದುದು ಮಘೆಯೊಳಿರ್ದಂದು ಕಾಯ್ವು (ಂತ) ಪೂರ್ವಂ |
ಜನಕೆಲ್ಲಂ ತೋಱುಗುಂ ದುರ್ನಯಮುಮಸದಳ ಮೆನೆ ತೋರ್ಕುಮಾಕಷ್ಟ[2]ದಿಂದಂ|| ೯೪ ||

ಕಂ. ಸಸಿಗೆ ಬಱನಕ್ಕು ಮಘೆಗಂ |
ಕುಸಿಗುಂ ನೃಪರಧಿಕಮೊಕ್ಕಳಂ ಪೀಡಿಸುಗುಂ ||
ಪುಸಿಯಲ್ತು ಮಘೆಯೊಳಿರೆ ಶನಿ |
ಸಸಿವದನೇ [3]ಬಗೆದುಕೊಳ್ಳ ತಾಂ ಪಸಮುಕ್ಕುಂ || ೯೫ ||

ಮ|| ಸವಿಶೇಷಂ ಬೆಳಸಕ್ಕು ಮಾದೊಡಧಿಕಂ ಛತ್ರಂಗಳಂ ಮಾಱುಗೊಂ |
ಡವನಿಂಬಾಗಿರೆ ಬಯ್ತು ಕೊಂಡಿಡು ಗಡಾ ದುರ್ಭಿಕ್ಷಮುಂ ಕುತ್ತಮುಂ ||
ಸವನಿಕ್ಕುಂ ಸಲೆ ಧೂಮಕೇತು ಗಗನಾಕಾರಂಗಳೊಳ್ ಮೂಡುಗುಂ |
ರವಿಜಂ ಪೂರ್ವೆಗೆ ಬಂದೊಡಿಂತಿನಿತುಮಂ ಮಾಳ್ಕುಂ ಮಹೀರಂಗದೊಳ್ || ೯೬ ||

ಕಂ|| ಉತ್ತರೆಯೊಳ್ ಶನಿ ನಿಲೆ ಕೇ |
ಳುತ್ತಮಮಂದು ಪಿರಿದು ಮೂಱುಖಂಡುಗಮಕ್ಕುಂ ||
ಬಿತ್ತರದೆ ನೆಲಸಿ ನಿಲ್ಲದೆ |
(ಉ)ಬತ್ತಮನೆಲೆ ಮರುಳೆ ಕೊಂಡು ಬಯ್ತಿಡು ಬೇಗಂ || ೯೭ ||

ಮ|| ಬೆಳಗುಂ ಧಾನ್ಯಚಯಂಗಳೆಲ್ಲಮಧಿಕಂ ವಿಸ್ತಾರದಿಂ ಹಸ್ತದೊಳ್ |
ನಳಿನಾಕ್ಷೀ ಶನಿ ಬಂದು ತಾಂ ನೆಲಸಿದಂದಿಷ್ಟಾರ್ಥದಿಂ [4]ಸೃಷ್ಟಿಯೊಳ್ ||
ಮಱಿ ಕೊಳ್ಗುಂ ಪಿರಿದರ್ಘಮಕ್ಕು ಮುದದಿಂದಾದೆಲ್ಲಮಂ [5]ಕೇಳ ನೀ |
ನಿಳೆಯಾಳ್ದಂಗೆ ನರಾಧಿಪಂಗೆ ಪಿರಿದುಂ ಪೊಲ್ಲೆಂಬುದುಂ ನಿಶ್ಚಯಂ || ೯೮ ||

ಕಂ|| ಚಿತ್ರೆಯೊಳೆಸೆದಿರೆ ಶನಿಯುಂ |
ಬಿತ್ತರದಿಂ ಬೆಳೆಗು ಬೆಳಸು ಪಿರಿದುಂಟರ್ಘಂ |
ಚಿತ್ರೈಸಿ ಕೇಳು ನೀನವ |
ನುತ್ತಮದೈವಜ್ಞ ಬಲ್ಲ ತದ್ವಿಷಮದೊಳಂ || ೯೯ ||

ಮಲ್ಲಿಕಾಮಾಲೆ|| ಭೂತಳಂ ಬೆಳೆಗುಂ ಸಮಸ್ತ ವಿಶೇಷದಿಂ ಧನಧಾನ್ಯದಿಂ |
ಪ್ರೀತಿಸೂವುದು ಚಿತ್ತವೃತ್ತಿಯೊಳಿರ್ಪರಾ ಮನುಜರ್ಕಳುಂ ||
ಸ್ವಾತಿಯೊಳ್ ಶನಿ ಬಂದು ತಾಂ ನೆಲಸಿರ್ದೊಡಂದು ಸುಭಿಕ್ಷ ಮಾ |
ಮಾತು ತಪ್ಪದು ತಪ್ಪಲಕ್ಕುಮೆ ಸೋಮನಾಥಮತೋಕ್ತಿಯಿಂ || ೧೦೦ ||

---

1 ಮೇನೋ. 2 ಮುಂದುಂ. 3 ಬಗೆದುಕೊಳ್ಗೆ, ಬಗೆದುಕೇಳ್ ತಾಮುಬ್ಬಸಮಕ್ಕುಂ. 4 ಸ್ತ್ರೀಪ್ರಿಯಂ. 5 ಕೇಳಿರೈ.

*ಶನಿ ಬಂದಾಶ್ಲೇಷೆಯೊಳಂ । ತನುನಯದಿಂದಾಗ ನೆಲಸಿದೆಂದಾಧಾನ್ಯಂ ||
ಮುನಿ ಪೇಟ್ದನಿಷ್ಟದಿಂದಂ । ಜನಕೊಳ್ಳಿತು ಧರೆಯೆ ಬೆಳೆಗುಮೆಂದಂ ರಟ್ಟಂ ||

—ಒಂದು ಪ್ರತಿಯಲ್ಲಿ ಮೇಲಣ ಪದ್ಯಕ್ಕೆ ಪ್ರತಿಯಾಗಿ ಈ ಕಂದಗಳಿವೆ.

ಕಂ|| ಬಂದು ವಿಶಾಖೆಯೊಳಿರೆ ಶನಿ |
ಕುಂದುಗುಮರ್ಘಂ ಕಡಂಗಿ ಕಾರ್ತಿಕೆಯೊಳ್ ಸಲೆ ||
ಸಂದಿಸುಗುಂ [ಬೆಳಸು] ಪಿರಿದ್ಕ |
ನಿಂದಿತಗುಣ ಮೊಳ್ಪದೆನಲು ಬೆಳಸಿಂಗಕ್ಕುಂ || ೧೦೧ ||

ಉ|| [4]ಓಟಿಯಿಪ್ಪೋಜೆಯಿಂದೆ ಚಯಿ(ಚೈ)ತ್ರದೆಡೆಗರ್ಘಮುಮೇಱೆ ಬಟಿಕ್ಕೆ ಕುಂದುಗುಂ |
ಪಾಟಿಸಿ ಮೂಱುಮೂಱುವರೆ ಖಂಡುಗದರ್ಘದೆ ಮತ್ತಮಂತೆ ತಾಂ ||
ತಾಟಿಸಿ ಧೂಮಕೇತು ನೆಗೆದುಂ ಸಲೆ ಡಾಮರಮಕ್ಕು ಮೆಲ್ಲಿಯುಂ |
ಕೂಟಮನಾಸೆಗೆಯ್ಗು(ಯ್ದು) ಶನಿ ಬಂದನುರಾಧೆಯೊಳಿರ್ಪ ಕಾಲದೊಳ್ || ೧೦೨ ||

ಕಂ|| ಒಂದನೆ ಶನಿ ಜ್ಯೇಷ್ಠೆಯೊಳಿರೆ |
ಕುಂದುಗುಮರ್ಘಂ ಕಡಂಗಿ ಪಶವಂ(ತ)ದಕ್ಕುಂ ||
[1]ಸಂದೆಯುಮೇಂ ನರ್ಮದೆವರ |
ಮೊಂದೆಡೆ ಕಡೆವೆಳೆಸುಮಂತೆ ಕುಮ್ಮರಿ ಬೆಳೆಗುಂ || ೧೦೩ ||

ಚಂ|| ಇಳೆ ಬೆಳೆಗುಂ ಸಮಸ್ತ ಧನಧಾನ್ಯಚಯಂಗಳನಿಂತು ಮೂಲದೊಳ್ |
ತಳರದೆ ಪೂರ್ವಷಾ[2]ಢೆಯೊಳಿರಲ್ ಬೆಳಸರ್ಘಮುಮಕ್ಕುಮಾಗಿಯುಂ ||
[3]ಕಲವೆಯುನಾಳಿಯುಂ ಪಿರಿದು ತುಂತುರುವಕ್ಕುಮದಂತೆ ಕಾಲದಿಂ |
ಬಿಳಿವೆಳೆ ಪೂರ್ವದೇಶದೊಳೆ ಡಾಮರ ಮಧ್ಯದೊಳಕ್ಕುಗುಂ ಗಡಾ || ೧೦೪ ||

ಶಾ|| ಶ್ರೀಶೈಲಾಗ್ರದ ದೇಶಮೆಲ್ಲ ಬೆಳೆಗುಂ ಕುಂದರ್ಘಮಂತಾಗಿಯುಂ |
ಲೇಸಾಗೊಪ್ಪುವ ಪೂರ್ವಷಾಢೆ[4]ದೊಳಿರಲ್ ಲೀಲಾಮಹೋತ್ಸಾಹದಿಂ ||
ದೇಶಂ ಗಾರ್ಗ್ಯಮುನೀಂದ್ರವಂದ್ಯ(ಚಂದ್ರ)ನಿದುಮಂ ಪೇಟ್ದಂ ಗಡಾ ಮಾಟ್ಕಿಯಿಂ |
[5]ಶ್ರೀಶಂ ಪೇಟ್ದು ಪದೇಶದಿಂದೆ ನುಡಿದಂ ಕಾರ್ಯಾರ್ಥದಿಂ ನಿಶ್ಚಯಂ || ೧೦೫ ||

ಕಂ|| ಉತ್ತರಷಾಢೆಯೊಳಿರೆಯುಂ |
ಬತ್ತಮುಮಂದಕ್ಕುಮರಸುಗೆಯ್ವ(ಯ್ದು)ರ್ ಸಾಗುಂ ||
ಬಿತ್ತರದಿಂ ಶ್ರವಣದೆ ಶನಿ |
ಕುತ್ತುಮುಮಂತಲ್ಪಮಾಗೆ ಮಟಿಯಂ ಮಾಟ್ಕುಂ || ೧೦೬ ||

ಮ|| ರವಿಜಂ ಬಂದು ಧನಿಷ್ಠೆ[6]ಯೊಳ್ ನೆಲಸಿದಂದರ್ಘಕ್ಷಯಂ ಕುಂದುಗುಂ |
ಸವಿಶೇಷಂ ಮಡಗಿಟ್ಟಭಂಡಮುವು [7]ತಾನಿಕ್ಕಂಡುಗಂ ಮಾಱುಗುಂ ||
ಕವಿ ಪೇಟ್ದಂತಿರೆ ಧೂಮಕೇತು [8]ನೆಗೆಗುಂ ಗೋದಾವರೀತೀರದಂ |
ದವಿಕಲ್ಪಂ ಬೆಳಸಕ್ಕುಮಾಗದು(ರು)ಗಡಾ ಕಾಶೀನದೀತೀರದೊಳ್ || ೧೦೭ ||

ಕಂ|| ಶತಭಿಷೆಯೊಳ್ ಶನಿ ಬಱಗುಂ |
ಮತಿವಂತೇ(ತಾ) ಬೆಳಸುಮಿಲ್ಲ ಪೆರ್ದೊಱೆಯು ಮಹೀ ||
ಪತಿ ಸಾಯ್ಗುಂ ಕಿಱುಕಾರ್ತಿಕ |
ಸಿತದಷ್ಟಮಿಯಾದಿಯಾಗಿ ಮಂಡಲವರ್ಷಂ || ೧೦೮ ||

1 ಸಂದೇಹಮ ನರ್ಮದತಿಯುಂ ಮುಂದಿದೆ. 2 ಢದೊಳು ಕಾಲ್ಲೆಳಸ. 3 ಕಳವೆಯೊಳಗಿಯುಂ. 4 ದಱುರಮ. 5 ಶ್ರೀಯುಂಶಂ. 6 ದೊಳ್ ಶನಿ ನಿಲೆನೆಲದ. 7 ತಾದೀಱುಂ, ತಾಱಿಱು. 8 ಪೊಗೆಗುಂ.

ಮ|| ಇದು ಗೋದಾವರಿಯಿಂ ಸಮುದ್ರದೊಳಗೆಲ್ಲಂ ಕೇಳಿರೈ ವೃಷ್ಟಿಯಂ |
ಬೆದೆಯಕ್ಕುಂ ಗಡ ಕಾರಪುಣ್ಣಿಮೆಯೊಳಂ ಸಂತೋಷದಿಂ ಗೋಕುಲಂ ||
ವಿದಿತಂ ಕೇಳ್ ಕಱಗುಂ ಧರಿತ್ರಿ ಬೆಳೆಗುಂ ನೆಲ್ [1]ನಿಲಲುಮೊದೆತ |
ಪ್ಪದುನಿತ್ತೋಡಿರೆ ಪೂರ್ವ(ರ್ಣ) ಭಾದ್ರಪದದೊಳ್ ಸಂತೋಷಮಕ್ಕುಂಗಡಾ||೧೦೯||*

(ಇಂತು ಶನಿಚಾರಂ)

ಪುನರುಕ್ತಶನಿಚಾರಂ (೨)

ವ|| ಪುನರುಕ್ತ ಶನಿಚಾರಮಂ ಪೇೞ್ವೆಂ—

ಕಂ|| ಶ್ರೀಮತ್ಸರ್ವಜ್ಞಂಗೆ ಮ |
ನೋಮುದದಿಂದೆಱಗಿ ಶನಿಯ ಚಾರದ ಫಲಮಂ ||
ಭೂಮಂಡಲಕ್ಕೆ ಹಿತಮೆಂ |
ದೀ ಮಾೞ್ಕೆ[2]ಯೊಳಱದು ಪೇೞ್ದನಚಳಿತವಚನಂ ||೧೧೦||

†ಅಶ್ವಿನಿಯೊಳ್ ಶನಿಯಿರೆ ತಾ(ಯು)ಂ |
ನಿಸ್ಸಂಶಯಮಾಗಿ ಬೆಳೆವುದರ್ಘಮುಮ(ಮದ)ಕ್ಕುಂ ||
ಕಾಶೀದೇಶದೊಳಂ ವಾರ |
ಣಾಸಿಯ ಪೆರ್ದೊಱೆಯ ತಡಿಗಳು [3]ಭಯಂ ಬೆಳೆಗುಂ ||೧೧೧||

ಭರಣಿಯೊಳಿರೆ ಶನಿ [4]ನೆಲನಂ |
ತಿರೆ ಸದ್ಯಂ ಬೆಳಸುಮಕ್ಕುಮರ್ಘಂ ಕುಸಿಗುಂ ||
[5]ಶರಧಿಯೆ ಬಳಸಿದ ಸೀಮೆಯ |
ವರರ್ಗೆಲ್ಲಂ ಶೋಕಮಕ್ಕು ರುಜೆಯುಂ ಪಿರಿದುಂ ||೧೧೨||

ಇರೆ ಶನಿ ಕೃತ್ತಿಗೆಯೊಳ್ ಕಡು |
ಪಿರಿದಾಗಿರೆ ಬೆಳೆಗುಮಲ್ಲಿ ಮೞೆಯಕ್ಕುಂ ಮುಂ ||
ದಿರೆ [6]ಪಸವಕ್ಕು ಗೋದಾ |
ವರಿ ಯಿರ್ತಡಿ ಬಱಗುಮುೞಿದೆಡೆ ಕಱಗುಂ ||೧೧೩||

ನಿಲೆ ಶನಿ ರೋಹಿಣಿಯೊಳ್ ಮಂ |
ಡಲ ವರ್ಷಮುಮಾಗಿ ಬೆಳೆಗು ಮಲ್ಪಂ ಬೆಳಸುಂ ||
ಫಲಮಾಗಿ ಪುಷ್ಯಮಾಸದ |
ತ(ಸ)ಲೆಯೊಳ್ ಬೞಿಕರ್ಘಮಿೞಿಗು ನಾಗುಳಮಕ್ಕುಂ ||೧೧೪||

---

1 ನೆಲಂ ನಿಲಲುನೋಡಿರೆ ತ. 2 ಯೊಳಿರ್ದನಲ್ತೆ!ಅಚಳಿತವಚನಾ. 3 ಳತ್ತಡೆ, ಳಿರ್ತಡಿ? 4 ತಾನುಂ ಧರೆಯೊಳಂ ಬೆಳಸು ಪಿರಿದುಮರ್ಘಂ ಪೆರ್ಚುಗುಂ, ಪಿರಿದು ಪೆರ್ಚುಗು ಮರ್ಘಂ. 5 ಸಱಸ...ಜಗುನೆಯ । ಪರಿದೆಡೆಯಿರ್ತಡಿಯುಮೆಯ್ದೆ ಬೆಳೆಗುಮಮೋಘಂ. 6 ಫಲಮಕ್ಕುಂ .........ಯಿರ್ತಡಿಯತ್ತ ಶುಭನ(ದ) ಮಕ್ಕುಂ ಋಟ್ಟಾ.

*ಇಲ್ಲಿ ಉತ್ತರಭಾದ್ರೆ, ರೇವತಿ ಈ ಎರಡು ನಕ್ಷತ್ರಗಳ ಫಲ ಬಿಟ್ಟುಹೋಗಿದೆ.

†ಈ ಪದ್ಯದ ಪ್ರಾಸು ವಿಲಕ್ಷಣವಾಗಿದೆ, ಶ್ವಿ, ಸ್ಸ, ಶೀ, ಸಿ—ಅಕ್ಷರಗಳಿಗೆ ಪ್ರಾಸಿದೆ.

ಕಂ|| ಮೃಗಶಿರದೊಳ್ ಶನಿಯಿರೆ ಕಾ |
ಳ್ಗಗಕಿಕ್ಕಂ(ಖ್ಬಂ)ಡುಗಮೆ ಭತ್ತಮರ್ಘಂ ಬಟುಕಂ ||
[1]ಅಗಣಿತ ವಿಡ್ವ್ವರಮಕ್ಕುಂ |
ಜಗದೊಳಗಿದ ತಿಳಿಯೆ ಪೇಳ್ದ ನ(ರ)ಭಿನವಗಾರ್ಗ್ಯಂ(ರ್) || ೧೧೫ ||

ಶನಿಯಾರ್ದ್ರೆಯೊಳಿರಲಲ್ಪಮೆ |
ಪನಿಯಕ್ಕುಂ ಧರೆಯೊಳರ್ಘಮಕ್ಕುಂ ಭತ್ತಂ ||
ಸೆನಿಯದೆ ತಾಂ ಕಡೆ ಬೆಳೆಗುಂ |
ಯಿನಜೆಯು ನರ್ಮದೆಯು ನಡುವಣರಸುಗಳಳಿಗುಂ || ೧೧೬ ||

ಶನಿಯಿರೆ ಪುನರ್ವಸುವೊಳ್ |
ಸನಿಶ್ಚಯಂ ಸರ್ವಧಾನ್ಯಮೆಲ್ಲಂ(ತ್ತಂ) ಬೆಳೆಗುಂ (ಜಗದೊಳ್) ||
[2]ಜನಮೊಳ್ಪಂ ಪಡೆಗುಂ ಬಡ |
ಗನಾಡ ಕೌಶಲದ ನೃಪತಿ ರುಜೆಯಿಂ ಸಾಯ್ಗುಂ || ೧೧೭ ||

ಶನಿ ಪುಷ್ಯದೊಳಿರಲಲ್ಪಂ |
ಪನಿಯಾದಂದಾದೆ ಕಾರ್ತಿಕಾಂತ್ಯಂ ಬರೆಗಂ ||
ಜನಿಯಿಸುಗುಂ(ಪುದು) ಮಂಡಲವರ್ಷಂ |
ಜನಪಂಗತಿ ಹರ್ಷಮೆಂದನ(ರ)ಭಿನವಗಾರ್ಗ್ಯಂ(ರ್) || ೧೧೮ ||

ಮಂದಂ ಬಂದಾಶ್ಲೇಷೆಗೆ |
ನಿಂದಂದತಿಹರ್ಷಮಕ್ಕುಮರ್ಘಂ ಕುಸಿಗುಂ ||
ಸಂದಿರ್ದ ಮಾಳವಾಧಿಪರ್ |
[3]ಸಂದೆಯಮೇನಱವರೆಂದ ಬಟ್ಟೆವೆಡಂಗಂ || ೧೧೯ ||

ನಿಲೆ ಮಘೆಯೊಳ್ ಶನಿ ಬಱನಿಂ |
ದಲೆಗುಂ ಬೆಳಸುಂ ಕನಿಷ್ಠಮಕ್ಕುಂ ನೆಲದೊಳ್ ||
ಕಲಹಂ ಪೊಣ್ಮುಗುಮುದ್ಯ |
ದ್ವಿಲಸಿತ ಕಾಂಚೀಸುರಾಷ್ಟ್ರಪತಿಗಳ್ ಸಾವರ್ || ೧೨೦ ||

ಇರೆ ಶನಿ ಪೂರ್ವೆ(ಪುರ್ಬೆ)ಯೊಳಂ ತಾಂ |
ವರುಷಂ ಬೆಳಸಿಲ್ಲ ಕುಸಿಗುಮರ್ಘಂ ಗೋದಾ ||
ವರಿಯಿಂ ಬಡಗಲ್ ಕುತ್ತಂ |
ಪಿರಿದಕ್ಕುಂ [4]ವೆಂಗಿನಾಡ ನಾಳ್ವಂ ಸಾವಂ || ೧೨೧ ||

ಉತ್ತರೆಯೊಳ್ ಶನಿ ನಿಲೆ ಮಟಿಕೆ |
ಪತ್ತುಗೆ ಬೆಳೆ ಬೆಳೆಗುಮರ್ಘಮುಂ ಕುಂದಿರ್ಕುಂ ||
ಭತ್ತಂ ಪ್ರಿಯಮಕ್ಕುಂ ಪಶು |
ಗು(ಕು)ತ್ತಂ ಗೊಂಡಲಗುಂ ಬಟಕೆ ಮಾನಸರಟಿವರ್ || ೧೨೨ ||

1 ಬರೆವಡೆ. 2 ವಿನಯದ ಕೌಸಲದೇಶದ. 3 ರಂದಱ(ದಿ)ಗುಂ ತಪ್ಪದೆಂದನಭಿನವಗಾರ್ಗ್ಯರ್.
4 ಮುಂದನಲ್ತೆ ಬಟ್ಟೆವೆಡಂಗಾ.

ಕಂ|| ಹಸ್ತದೊಳಿರೆ ಶನಿ ಬಱದೊಳ್ |
ಜಸ್ತರಪ್ರಜೆ ರುಜೆಯೊಳಳಿಗುಮರ್ಘಮುಮಿೞಗುಂ ||
ವಿಸ್ತರಿಕುಂ ಮೂಗುಳದೊಳ್ |
ಸ್ವಸ್ತಂ ನಿಲೆ ಗಂಗಮಂಡಳೀಕರ್ ಸಾವರ್ || ೧೨ ||

ಚಿತ್ರೆಯೊಳರ್ಕಜನಿರ್ದಂ |
ದುತ್ತಮ ಕಾರ್ ಬೆಳೆಗುಮಲ್ಲಿ ಕಡೆವೆಳಸಕ್ಕುಂ ||
ಭತ್ತಂ ಪ್ರಿಯಮಕ್ಕುಂ ಪ್ರಜೆ |
ಚಿತ್ರಕ್ಷ(ಕ್ಷಿ)ತಿಯಿಂದೆ ಧರ್ಮಮಂ ಕೆಯ್ಕೊಳ್ಳ(ಳ್ವ)ರ್ || ೧೪ ||

ಸ್ವಾತಿಯೊಳಿರೆ ಶನಿಯುಮ |
ಶೀತಂ ಬೆಳಸಕ್ಕು ಮರ್ಘಮಕ್ಕುಂ ಸೌಖ್ಯ ||
ವ್ರಾತಂಗಳ್ ಪ್ರಜೆಗಕ್ಕುಂ |
1ಖ್ಯಾತ ಕಳಿಂಗಾಧಿನಾಥಗಂ ಸಾವಕ್ಕುಂ || ೧೫ ||

ಶನಿ ನಿಲೆ ವಿಶಾಖೆಯೊಳ್ ಬೆಳ |
ಸಿನಿಸಕ್ಕುಂ ತೆಂಕನಾಡ ಭತ್ತಂ ಪ್ರಿಯಮಿಂ ||
ತನುಪಮ ಮಾಳವ ದೇಶದ |
ಜನಪತಿ ಗೞಿವಕ್ಕು ಧೂಮಕೇತುಗ2ಳೊಗೆಗುಂ || ೧೬ ||

ಚಂ|| ಶನಿಯನುರಾಧೆಯಲ್ಲಿರೆ ನೆಲಂ ಬೆಳೆಗುಂ ಮಿಗೆ ಚೈತ್ರಮಾಸದಂ |
ದನುನಯಮಾಗೆ ಪೆರ್ಮೞೆಯ ತೆಂಕಲೆ ಪೆರ್ವಸಮಕ್ಕು ಡಾಮರಂ ||
ಘನಪಥದಲ್ಲಿ ಕೇತುವೊಗೆಗುಂ ಬೞಕಂತೆ ವರಾಟ(ದನಾಳ್ವ) ನಾಥನಾ |
ಶ್ವರನೃಪ ಸಾಗು ಮಿಾಧರೆಗೆ ದುರ್ನಯಮೆಂದಪನಲ್ತೆ ನಿರ್ಣಯಂ || ೧೭ ||

ಕಂ|| ಜ್ಯೇಷ್ಠೆಯೊಳಿರೆ ಶನಿ ಬೆಳಸು ಕ |
ನಿಷ್ಠಂ ಕೊಱೆ ಬೆಳೆಗುಮಲ್ಪವಿಳೆಗಂ (ಸಲೆ) ಸಂ ||
ತುಷ್ಟಂ ಮಂಡಲವರ್ಷಂ |
ಸೃಷ್ಟಿಯ ಜನ ಕಿಡುಗುಮೆಂದನಭಿನವಗಾರ್ಗ್ಯಂ || ೧೮ ||

ಇರೆ ಶನಿಮೂಲದೆ ಗೋದಾ |
ವರಿಯಿಂದಂ ತೆಂಕಣದೆಸೆಗೆ ಪಸವುಂ ಬಡಗಂ ||
ನಿರುತಂ ಕಡೆವಟ್ಟೆಯಾಗದು |
ಧುರದೊಳಗಂದು ಮಧ್ಯದೇಶದರಸಂ ಸಾಗುಂ || ೧೯ ||

ಶನಿಯಿರೆ ಪೂರ್ವಾಷಾಢದೊ |
ಳನವರತಂ ಮೞೆಯುಮಕ್ಕು ಬೆಳಸಕ್ಕುಂ ಗೋ ||
ಧನಕೆಲ್ಲ ಮಾರಿಯಕ್ಕುಂ |
ಜನಪಂ ಗೊಳ್ಪಕ್ಕುಮೆಂದನಭಿನವ3ಗಾರ್ಗ್ಯಂ || ೨೦ ||

1 ಖ್ಯಾತಂ ಕಳಿಗದೇಶನಾಥಗಂ, 2 ಳಱುಗುಂ. 3 ಚಂದ್ರಂ.

ಕಂ|| ಪ(ನ)ಡೆದು ಶನಿಯುತ್ತರಾಷಾ |
ಢದೊಳಿರೆ ಕಾರಲ್ಪಮಾಗಿ ಕಡೆವೆಳಸುಂ ತ ||
ಪ್ಪದೆ ಬೆಳೆಗುಂ ವೆಂಗಿನಾಡಂ |
ಮಂದಮಾಗಿರೆ ಬೇಡರಾಗಳುಂ ಬಿಡದಲೆವರ್ || ೧೩೧ ||

ಶ್ರವಣದೊಳಿರೆ [1]ಮುೞಿಗಳ್ |
ಪವಣಿಲ್ಲದೆ ಬೆಳಸುಮಕ್ಕು ಮೂಡಣನಾಡಂ ||
ಕವಿದಿಱುಗುಂ ಬೇಡರ್ ಡಾಮರ |
ಭುವನದೊಳೆರಡಕ್ಕೆ ಕಾರ್ಯನಾಶಮುದಕ್ಕುಂ || ೧೩೨ ||

ನಿಲೆ ಶನಿ ಧನಿಷ್ಠೆಯೊಳ್ ಮುೞಿ |
ಸಲೆ ಕೊಳ್ಗುಂ ಚೈತ್ರಕಿಕ್ಕಂ(ಖ್ಖಂ)ಡುಗ ದಲ್(ಮುಂ) ||
ಫಲಮಂ ತಾವೀಯದೆ ಯಲು |
ಸಲೆಯಕ್ಕುಂ ಧೂಮಕೇತು ತಪ್ಪದಮೋಘಂ || ೧೩೩ ||

ಇರೆ ಶನಿ ಶತಭಿಷೆಯೊಳ್ ನೃಪ |
ರರಸಿಯರಾ ಮಾರ್ಗಶಿರಕೆ ಕಿಚ್ಚಂ ಪುಗುವರ್ ||
ಧರೆಗಂ ಮಾರಿಯು ಪಸವುಂ |
ತಿರದಕ್ಕುಂ ಕಾಂಚೀಪತಿ[2] ಕಳಿಂಗರ್ ಕಿಡುವರ್ || ೧೩೪ ||

ನರ್ಮದೆಯಿಂ ಗೋದಾವರಿ |
ಯಿಮಳ್ಕುಂ ಪೆರ್ದೊಱೆಯು ತೆಂಕಣನಾಡುಂ ಬೆಳೆಗುಂ ||
ಪೆರ್ನೊರೆ ಪೊಯ್ಗು (ಕೊಳ್ಗು) ಮಲ್ಪಮ |
ದೆರ್ಮೆಗೆ ಗಜತುರಗ ಗೋಕುಲಕ್ಕಂ ಮರಣಂ || ೧೩೫ ||

ಚಂ|| ಇರೆ ಶನಿ ಪೂರ್ವಭಾದ್ರಪದದೊಳ್ ಮುೞಿಯುಂ ಬೆಳಸುಂ ವಿಶೇಷಮಾ |
ಧರೆಯೊಳೆ ಗೋಕುಲಂ ಕಱುಗು ಮಿಂಚಿನ ಪೆರ್ದೊಱೆಯಿಂದೆ ತೆಂಕಲುಂ ||
ಕರಮೆ ಸುಭಿಕ್ಷಮಾ [3]ಪರಮ ಪಾಟಲಿಪುತ್ರಮಹೀಶರಿರ್ವರುಂ |
ಮರಣಮನೆಯ್ದುವರ್ ಪಿರಿದು ದುರ್ನಯಮೆಂದಪ ಱಟ್ಟುಗಾಂಕನುಂ || ೧೩೬ ||

ಕಂ|| ಉತ್ತರ ಭಾದ್ರಾಪದದೊಳ್ |
ಮತ್ತಂ ಶನಿ ನೆಲಸಿರಲ್ಕೆ ಮುೞಿ ಬೆಳಸುಂ ತೆಂ ||
ಕತ್ತಲ್ ಮಧುರೆಯರಸಱಿಗು |
ದುತ್ತ ಗುಣರ್ [4]ಪಲರುಮಕುಟಬದ್ಧರ್ ಸಾವರ್ || ೧೩೭ ||

1 ಮುೞಿ ತಾಂ ಪವಣಿಲ್ಲಮಲ್ಪಬೆಳಸು ಮೂಡಳನಾಡಂ...... ಸಕಲಕಾರ್ಯ ವಿನಾಶಂ. 2 ಗಳೆಲ್ಲರ್. [3] ಪುರದ. 4 ಪಲರುಮಕ್ಕು ಭಟರ್ ಸುರ್ಗಂ.

ಕಂ|| ರೇವತಿಯೊಳ್ ಶನಿ ನಿಲೆ ಕಡೆ |
ಯ ವೆಳಸುಂ ಬೆಳೆಗುವಲ್ಲಿ ಕಾರಲ್ಪಂಗಳ್ ||
ಭಾವಿಪೊಡಾಶ್ವಯುಜಕೆ ಕಾಂ |
ಚೀವಲ್ಲಭರೞಿಗುಮಿಕ್ಕಭಂಟರುಮೞಿಗುಂ || ೧೩೮ ||

(ಇಂತು ಪುನರುಕ್ತ ಶನಿಚಾರಂ)

ಶನಿಯ ರಾಶಿಚಾರಫಲಂ (೩)

ವ|| ಶನಿಯರಾಶಿ ಫಲಮಂ ಪೇೞ್ವಂ—

*ವ|| ೧. ಮೇಷದೊಳ್ ಶನಿಯಿರೆ ಚಕ್ರಗೊಟ್ಟ(ಡ್ಡ)ಮಕ್ಕುಂ, ಹೊಂಗೆ(ಪೊನ್ನೆ) ಜೋಳಂ ನಾಗಂಡುಗಮಕ್ಕುಂ. ೨. ವೃಷಭದಲ್ಲಿ ಶನಿಯಿರೆಯುಂ ಕರ್ನಾಟಕ ಚಿತ್ರಪುರಿಯುಂ ಕಿಡುಗುಮನ್ಯಾಯಮಕ್ಕುಂ, ಯಮುನೆಯೆಂಬ ತೊಱೆಯ ತಡಿಯಲ್ಲಿ ಧರ್ಮಂ ಪೆರ್ಚುಗುಂ, ಜೋಳಂ ಪತ್ತುಕೊಳಗಮಕ್ಕುಂ, ಬೆಳುವಲನಾಡು ಕೆಟ್ಟು ಜೋಳಂ ಪತ್ತುಬಳ್ಳಮಕ್ಕುಂ. ೩. ಮಿಥುನದಲ್ಲಿ ಶನಿಯಿರೆ ಕಳಿಂಗದೇಶದ ಬೇಡರ್ಗೆ ಸುಖಮಕ್ಕುಂ, ಪರ್ವತದೇಶಕ್ಕೆ ಕ್ಷಾಮಮಕ್ಕುಂ, ಗಂಗವಾಡಿ ಕಿಡುಗುಂ. ೪. ಕರ್ಕಾಟಕದಲ್ಲಿ ಶನಿಯಿರೆ ಕಂಚಿಯುಂ, ಬಾದಾವಿಯುಂ, ಗೋದಾವರಿ ತಡಿಯುಂ ಕಿಡುಗುಂ, ವಂಗದೇಶದರಸೞಿಗುಂ, ಅರ್ಘಮೊಂದು ಖಂಡುಗಮಕ್ಕುಂ. ೫. ಸಿಂಹದೊಳ್ ಶನಿಯಿರಲ್ ಕರಿತುರಗಾಗಿ ಪಲಂಬರಸುಗಳೞಿವರ್, ಉಳಿದರಸುಗಳ್ ತೊಱೆ ವಾಯ್ದೋಡುಗುಂ, ಗಂಗಾನದಿಯಿಂ ಪೆರ್ದೊಱೆತನಕ ಬಱನಕ್ಕು ಪಾಂಡ್ಯದೇಶಂ ಕಿಡುಗುಂ. ಇನ್ನುೞಿದ ಕನ್ನೆ, ತೊಲೆ, ವೃಶ್ಚಿಕ, ಧನುರ್ಮಕರ ಕುಂಭ ಮೀನ ರಾಶಿಗಳಲ್ಲಿ ಶನಿಯಿರಲ್ ಶುಭಾಶುಭಂಗಳಿಲ್ಲಂ.

(ಇಂತು ಶನಿಯ ರಾಶಿಚಾರಫಲಂ)

ಗುರುರಾಶಿಚಾರಫಲಂ (೪)

ವ|| ಇನ್ನು ಗುರುಚಾರ ಫಲಮಂ ಪೇೞ್ವಂ—

ಕಂ|| ಕುಱಯುಂ ಸುರಗುರುವೇಱಲ್ |
ನೆಱೆ ತೋರ್ಕುಂ ಮೞೆಯು ಮರ್ಘಮುಂ ಧನಧಾನ್ಯಂ ||
ತುಱುಮಱ(ವೆಯ್ದಿ) ನಾಗಂ [1]ಯಜ್ಞ |
ಕ್ಕೆಱಗಿರ್ಪರ್ ದ್ವಿಜರೆ ಪಿರಿದು ಸಂತಸ[2]ದಿಂದಂ || ೧೩೯ ||

ವೃಷಭದೊಳೊಂದಿರೆ ಗುರು ಪೆ |
ರ್ವಸದಿಂದಂ ಗೋಕುಲಂಗಳುಂ ಬಾಲಕರುಂ ||
ಸಸಿಯುಂದು ಕ್ಷಯಮಕ್ಕುಂ |
ವಸುಮತಿ ಬೆಳಸಾಗದೆಯ್ದೆ ನಿರ್ಧನರಕ್ಕುಂ || ೧೪೦ ||

ಮಂತ್ರಿ ಮಿಥುನಕ್ಕೆ ಬರೆ ತಾಂ |
ಸಂತೋಷಂ ಕಿಡುಗು ಧರೆಗೆ ಪೆರ್ವಸದಿಂದಂ ||
ಸಂತತ ನೃಪವಿಗ್ರಹ ಮೆಂ |
ದೆಂತಿವು ಪಿರಿದಕ್ಕು ಜನಕೆ ಗುರುಚಾರದೊಳಂ || ೧೪೧ ||

1 ಯುಗಲಕ್ಕೆ. 2 ದಿರ್ಕುಂ. * ಈ ಭಾಗ ಮಾತ್ರ ವಚನದಲ್ಲಿದೆ.

ಕಂ|| ಕರ್ಕಾಟಕದೊಳ್ ಗುರುವಿರೆ |
ಕಾರ್ಕಡೆ ಮೞೆಯಕ್ಕು ಕಟಿವೆಕರ್ಬುಂ ಫಲವುಂ ||
ತೋರ್ಕುಂ ಪಸುಕೞೆಗುಮೆಂಬಿನಿ |
ತರ್ಕಂ ಶಿಶುಜಾತರೆಯ್ದೆ ಪೆರ್ಚುಗು [1]ಸತತಂ || ೧೪೨ ||

ಸಿಂಗ(ಹ)ದೊಳೊಂದಿರೆ ಗುರು ಕಲ |
ಹಂಗಳ್ ಪಿರಿದಕ್ಕು ನೃಪತಿಗಳ್ ಜನಮೞಿಗುಂ ||
ಪಿಂಗುಗು ವನಿತೆಯರುಂ (ಸು)ಧ |
ರಾಂಗನೆ ಕಡೆವೆಳಸುವಮಲ್ಪವೃಷ್ಟಿಗಳಿಂದಂ || ೧೪೩ ||

ಗುರು ಕನ್ನೆಗೆ ಬಂದಿರೆ ತಾಂ |
ಕೆಱೆ ತೀವಿ ಸಮಸ್ತಧಾನ್ಯಮೆಲ್ಲ(ತ್ರ)ಂ ಬೆಳೆಗುಂ ||
ಕಱೆಗುಂ ಪಸುಗಳ್ ಧರ್ಮ |
ಕ್ಕೆಱೆಗಿರ್ಪರ್ ಮನುಜರೆಯ್ದೆ [2]ದುಂದುಮೆಗಾಲಂ || ೧೪೪ ||

ತೊಲೆಗೆ ಬೃಹಸ್ಪತಿ ಬರೆ ವಾಂ |
ಕಲಿ[3]ಯಕ್ಕುಂ ನರರೆ ಯುದ್ಧಸಮರಂಗದೊಳಂ ||
ಸಲೆ ಮೞೆಕೊಂಡನುರಾಥೆಗೆ |
ನೆಲನೆಲ್ಲಂ ಸುಪ್ರಸನ್ನಮಾಗಿಯೆ ಬೆಳೆಗುಂ || ೧೪೫ ||

ಗುರು ವೃಶ್ಚಿಕಕ್ಕೆ ಬರೆ ಕಾ |
ರಿರದಕ್ಕುಂ ಕಡೆಯುಮಲ್ಪಧಾನ್ಯಮುದಕ್ಕುಂ ||
ಕೊರಗುವುದಲ್ಪದ ಮೞೆಯಿಂ |
ದೊರೆಕೊಳ್ಗುಂ ಜ್ಯೇಷ್ಠೆಮೂಲದೊಳ್ ಕಡೆ[4]ವೞೆಗಳ್ || ೧೪೬ ||

ಧನುಗೆವರೆ ದೇವಗುರು [5]ವಿಂ |
ಬಿನಲಿ ತಿಳಂ ಪೞ್ತಿಯುಪ್ಪು[6]ಮುಂ ಘನಮುಕ್ಕುಂ ||
ಘನವೃಷ್ಟಿಯಾಗಿ ಕಬ್ಬುಂ |
ಘನವಕ್ಕುಂ ಸರ್ವಧಾನ್ಯಮುಕ್ಕುಂ ಕಡೆಯೊಳ್ || ೧೪೭ ||

ಮಕರಕ್ಕೆ ಬೃಹಸ್ಪತಿ ಬರೆ |
ಸಕಲಾವನಿ ಕಾರುಕಡೆಯುಮಧಿಕಂ ಬೆಳೆಗುಂ ||
ಸಕಲಂ ಮೞೆ ಕೊಳ್ಗಂತೆನೆ |
ವಿಕಸಿತಫಲಮುಕ್ಕುಮರ್ಘಮುಕ್ಕುಂ ತುದಿಯೊಳ್ || ೧೪೮ ||

ಕೊಡನತ್ತ ಮಂತ್ರಿ ಬಂದಂ |
ದೊಡಗೂಡಲ್ ಬ್ರಹ್ಮಾಂಡವೊಡೆದು ಕೆಱೆತೊಱೆ [7]ಕೊಳಮುಂ ||
ಬಿಡದೊಂದಿ ಕರ್ವು ನೆಲ್ಲುಂ (ಕೊಱೆ) |
ನಡುಬೆಳಸುಂ ಬೆಳೆಗುಮೆಯ್ದೆ ಧಾನ್ಯಸಮೂಹಂ || ೧೪೯ ||

---

1 ನಿರುತಂ. 2 ಱಟ್ಟನೆಡಂಗಾ. 3 ತನದಿಂ ವಿಭ್ರಮುಂಗಳಂ ಮಾಱ್ಪವರಂ. 4 ವೆಳಸು(ಗು)ಂ. 5 ವಿಂಬಿನಿತುಮತಾಂ. 6 ಮಂದವುಮುಕ್ಕುಂ. 7 ಫಲಮುಂ, ಪಲವುಂ—ಎಂದಿರಬಹುದು.

ಕಂ|| ಗುರು ವಿಜಾನದೆಡೆಗೆ ಸಾರ್ದಂ |
ದಿರದಕ್ಕುಂ ಕಾರ ಬೆಳಸು ಪೆಂಡಿರ ಮನಸುಂ ||
ಕೊರಗುವುದಲ್ಲದ ಮುಟಿಯೊಳ್ |
ದೊರೆಕೊಳ್ಗುಂ ಕಡೆಯ ಬೆಳಸು ಸಿದ್ಧಾದೇಶಂ || ೧೫೦ ||

(ಇಂತು ಗುರುರಾಶಿಚಾರಫಲಂ—ನಕ್ಷತ್ರಚಾರಂ)

೧೮. ಬೃಹಸ್ಪತಿಯುದಯಾಸ್ತ ಫಲಂ

ವ|| ಇನ್ನು ಬೃಹಸ್ಪತಿಯ ವರ್ಷಫಲಮಮಂ ಪೇೞ್ವೆಂ—

ಕಂ|| ಗುರು ಕೃತ್ತಿಗೆಯೊಳ್ ರೋಹಿಣಿಯೆಂ |
ಬೆ[1]ರಡರ್ಕ್ಷದೊಳಮುದಯಮಾಗೆ ಕಾರ್ತಿಕಮಾಸ(ವರ್ಷ)ಂ ||
ಧರೆಯೊಳ್ ಪಸವಕ್ಕುಂ ಪುಸಿ |
ವರಶೂಲಂ ನುತವರಾಹಮತದೊಳ್ ಪೇೞ್ದಂ || ೧೫೧ ||

ಶಕಟಾನಲೋಪ ಜೀವ |
ಪ್ರಕರಂ ಕರಿಗಳ್ಗೆ ಪೊಲ್ಲ ಶಸ್ತ್ರಭಯಂ ಬಾ ||
ಧೆ ಕರಂ ಪುದುಗುಗು ತಾಂ ಕಾ |
ರ್ತಿಕಾಬ್ದದೊಳ್ ಪೀತಕುಸುಮಫಲಾಢ್ಯಂ || ೧೫೨ ||

ತ್ರಿವಿಧಿ|| ವರಚಂದ್ರಾರ್ದ್ರೆಯೊಳಂ ಗುರುವುದಯಿಸೆ (ಸೌಮ್ಯ)* |
ವರುಷಮುಂ ಮಟಿಗ[2]ಳಾಗದಿರದಿದ ಪುಸಿ |
ವರಶೂಲಮತಂ ತಪ್ಪುವುದೇ || ೧೫೩ ||

ಕಂ|| ಮಿಡಿಚಿ(ತೆ)ಯಿಲಿ(ಯೆಲಿ)ಯಿಂಚಿ ಮೃಗದಿಂ |
ಕುಡುಕುಗಳಂ ಕೊಳು(ಡು)ತುಮಿರ್ಪ ಖಗ(ಮಿಗ) ಸಂಕುಲದಿಂ ||
ಕಿಡುವುದು ಫಲಮುಂ ಪರಿಪುಂ |
ಪೊಡವಿಯೊಳಂ ಕೆಳೆಯರಾಪ್ತರೊಳ್ ಪಗೆಗೊಳ್ವರ್ || ೧೫೪ ||

†ಅದಿತಿಗುರು ಸರ್ಪ ಋಕ್ಷೆಯೊ |
ಳುದಯಿಸೆ ಗುರುಪುಷ್ಯವರ್ಷಮಕ್ಕುಂ ಜನಕ ||
ಭ್ಯುದಯಕರಂ ನೃಪರುಂ ತ |
ಣ್ದಿದರಪ್ಪರ್ ದ್ವಿಗುಣಮರ್ಘಮಕ್ಕುಂ ಜಗದೊಳ್ || ೧೫೫ ||

ಗುರು ಮಘೆ ಪೂರ್ವೆಯೊಳುದಯಿಸೆ |
ಧರೆಯೊಳ್ ಮಘಾಬ್ದದಲ್ಲಿ ಪಿತೃಪೂಜಾತ ||
ತ್ಪರರಪ್ಪರ್ ಿಳೆಯೊಳೆಲ್ಲಂ |
ಪಿರಿದುಂ ಸಂಪೂರ್ಣಮುಂಡು ತಣಿಗುಂ ಭೂತಂ || ೧೫೬ ||

1 ರಡಱೊಳಂ. 2 ಳಾಗದಿರವೆಂದು ಪುಸಿ.

*ಮಾರ್ಗಶಿರಮಾಸ - ಎಂದಿರಬೇಕು. †ಪುನರ್ವಸುನಕ್ಷತ್ರವಿಲ್ಲ.

ಕಂ|| ಗುರುವುದಯಿಸೆ ನೆಗಟ್ದುತ್ತರೆ |
ವರಹಸ್ತಂ ಫಾಲ್ಗು(ನ)ಮಾಸದಾ ವರುಷದೊಳಂ ||
ಧರೆಗೆ ಮಟಿ ಬೆಳಸುವಂಕ್ಕುಂ |
[1]ಆರಸರ ತಸ್ಕರರ ಬಾಧೆ ಜಗದೊಳಗೆಲ್ಲಂ || ೧೫೭ ||

ಸ್ವಾಗತಂ|| ಸಂದ ಚಿತ್ತಿ ಪವನರ್ಕ್ಷದೊಳಿರ್ದಾ |
ನಂದದಿಂ[2]ದುದಯಮಾದೊಡೆ ಚೈತ್ರ ||
ಕ್ಕಂದು ಬಂದು ಮಟಿ ಮಧ್ಯಮಮರ್ಘಂ |
ಕುಂದುಗುಂ ಬೆಳಸು[3]ಮಲ್ಪಮೆ ಧಾನ್ಯಂ || ೧೫೮ ||

ತ್ರಿವಿಧಿ|| [4]ಯಜನಧರ್ಮಂಗಳಂ ಭೂಭುಜರ್ (ಕಾದಿ) ಕಿಡಿಸುವರ್ |
ಗುಜುಗುಜುಗೊಳುತ್ತಿಹರ್ ಪ್ರಜೆಯೆಂಬುದ(ಸಾ)
ಸುಜನ ಜನಸ್ತುತ್ಯನಱಿಪಿದಂ || ೧೫೯ ||

ಕಂ|| ಇಂದ್ರಾಗ್ನಿಮಿತ್ರ ಋಕ್ಷೆಯೊ |
ಳಿಂದ್ರೇಜ್ಯ(ಜ್ಯ)ನುಮುದಯಮಾಗೆ ವೈಶಾಖಾ(ಕಾ)ಬ್ದಂ ||
ಸಂದಾ ಪ್ರಜೆಗಮತಿಶಯಾ |
ನಂದಕರಂ ದ್ವಿಜರ್ಗೆ ಸಂತತಂ ಧರೆ ಬೆಳೆಗುಂ (ಕೊಳ್ಗಂ) || ೧೬೦ ||

ಜ್ಯೇಷ್ಠೆಯೊಳಂ ಮೂಲದೊಳಂ |
ಶ್ರೇಷ್ಠಂ ಗುರುವುದಯಮಾಗೆ ಜ್ಯೇಷ್ಠಾಬ್ದಂ ತಾಂ ||
ಸೃಷ್ಟಿಗೆ ನೃಪಗೆ(ಗಂ)ರ್ ಬೆಳಸುಂ |
ಕಷ್ಟಂ ಕೊಱಿ ಬೆಳೆಗುಮುಱಿದ ಧಾನ್ಯಂ ಕಿಡುಗುಂ || ೧೬೧ ||

ಎರಡಾಷಾಢೆದೊಳುದಯಿಸೆ |
ಗುರುವಾಷಾಡಾಬ್ದದಲ್ಲಿ ಮಱಿಯಿಲ್ಲೆಂತುಂ |
ಆರಸಿಂಗೆ ಪುರಿಗೆ ಮಧ್ಯಮ |
ಮುದದಿಂದಾಸಸಿಗೆ(ಗ) ಮೊಳ್ಳಿತೆಂದಂ ಱಟ್ಟಂ || ೧೬೨ ||

ಶ್ರವಣಂ ಧನಿಷ್ಠೆ ಶತಭಿಷೆ |
ಯಿವಱೊಳ್ ಗುರುವುದಯಮಾಗೆ [5]ಶ್ರಾವಣಮಬ್ದಂ ||
[6]ಭುವನದೆ ಬೆಳಸಕ್ಕುಂ ಕ್ಷು |
ದ್ರವಿಗತಿಶಯದಿಂ ಭಕ್ತಬಾಧೆಯುಕ್ಕುಂ ನಿರುತಂ || ೧೬೩ ||

ಎರಡುಂ ಭಾದ್ರ(ಪದ)ಂ ರೇವತಿ |
(ಯೊಳೆ) ಸುರಗುರುವುದಯಿಸಲ್ಕೆ ಭಾದ್ರಪದಾಬ್ದಂ ||
ಧರೆಗೆಯ್ದೆ ಬೆಳಸುಂ ಪಿರಿದುಂ |
ಪರಿಭವಿಸು ಬಲಿಯ ರಾಜ್ಯದಿರವಂ ಪೋಲ್ಕುಂ || ೧೬೪ ||

---

1 ಅರಸುಂ. 2 ದುವೆ(ದೆಯ) ಮಾದೊಡೆ ಚೈತ್ರಬದಂದು. 3 ಮೆಂದಿರು ಧಾನ್ಯಂ, ಲ್ಪಮು ಧಾನ್ಯಂ. 4 ಯಜನಾದಿ ಧರ್ಮಮರ ಭೂ. 5 ಶ್ರವಣಾಬ್ದಂ ತಾಂ. 6 ಭುವನದೊಳು ಬೆಳಸು ಪಿರಿದುಂ ಕ್ಷಾದ್ರಾವಿಧ ಗತಿ ಭಕ್ತ.

ಮತ್ತಂ—

ಕಂ|| ಮತ್ತಂ ಕಾರ್ಬೆಳಸುಂ ಕಡೆ |
ಬಿತ್ತಿದೊಡಂ ಬೆಳೆಯದಿರ್ಕುಂ ದೇಶಕೆ ಪಿರಿದಾ ||
ಪತ್ತಕ್ಕುಂ ಕುಂಭದ್ವಯು |
ಕತ್ತಾಮರಣಂ ಪ್ರಭೂತಮಾವೊಂದೆಸೆಯೊಳ್ || ೧೬೫ ||

ನೆಗಳ್ದಶ್ವಿನಿ ಭರಣಿಯೊಳಿಂದ್ರ |
ನ ಗುರುವುದಯಿಸಿದೊಡಾಶ್ವಯುಜಮಾಸಾಬ್ದಂ ||
ಜಗಕಂ ಮಟೆಯುಃ ಸುಭಿಕ್ಷಂ |
1ಸೊಗಸಿರ್ಕುಂ ವೈರಿ ನೃಪರ ಭಯುವಿನಿಸಕ್ಕುಂ || ೧೬೬ ||
(ಇಂತು ಗುರುವಿನುದಯಾಸ್ತ ಮಾಸವರ್ಷ ಫಲಂ)

೧೯. ಬೃಹಸ್ಪತಿಯ (ಗುರುವಿನ) ವರ್ಷ ಫಲಂ

ವ|| ಇನ್ನು ಬೃಹಸ್ಪತಿಯ ವರ್ಷಫಲಮುಂ ಪೇೞ್ವೆಂ—

ಕಂ|| ಗುರುವೆರಡು ರಿಕ್ಷೆಯೊಳ್ ಪ |
ತ್ಸರಮಿರ್ದೊಡೆ ಪೊಳ್ತೆರಡುವರೆ ಮಧ್ಯಮ ಮೀ ||
ಶ್ವರನಯನ ಋಕ್ಷದಿ ವರ್ಷಂ |
ಬರಲಿರ್ದ್ದೆ ಕನಿಷ್ಠಮೆಂದ ಸುಕವಿನಿಧಾನಂ || ೧೬೭ ||

ಗುರುಶಕಟಾನಲ ಋಕ್ಷಂ |
ಶರೀರಮಾಷಾಢಯುಗ್ಮಮುಂ ಪೊರ್ಕುೞ್ ಭೀ ||
ಕರ ಸರ್ಪರ್ಕ್ಷಂ ಹೃದಯಂ |
ಪರಮಾರ್ಥಂ ನೇತ್ರಮಾಗೆ ಋಕ್ಷಂ ನಿರುತಂ || ೧೬೮ ||

ಮ|| ಒಡಲೊಳ್ ಪೊರ್ಕುೞೊಳಂತೆಯಾಹೃದಯದೊಳ್ ಪಾಪಗ್ರಹಂ ಕೂಡಿಯಿ |
ರ್ದೊಡೆ ಸಂದಗ್ನಿಭಯುಂ ಮಹಾಪವನಕ್ಷುತ್ಪೀಡಾಭಯಂ ಕಾಡುಗುಂ ||
ಕಿಡುಗುಂ ತಾಂ ಸಸಿಗಳ್ ಸಮೂಲಫಲ ನಿರ್ಮೂಲತ್ವಮೆಲ್ಲಂದದಿಂ |
ಕಡುದುಃಖಂ ಕಡೆಗಕ್ಕುಮೆಂದನಭಯುಂ ಸಮ್ಯಕ್ತ್ವರತ್ನಾಕರಂ || ೧೬೯ ||

ಕಂ|| ಉತ್ತರ ಮಧ್ಯಮ ದಕ್ಷಿಣ |
ದತ್ತಣ ವೀಥಿಯೊಳಮಿಂದ್ರ ಗುರು ನಡೆಯಲ್ ಸಂ ||
ದುತ್ತಮ ಮಧ್ಯ ಕನಿಷ್ಠಾ (ಷ್ಠತೆ) |
ವೃತ್ತಿಯೆ ಪ್ರಜೆಗಕ್ಕುಮಖಿಳವಸುಧಾತಳದೊಳ್ || ೧೭೦ ||

ಗುರುವೊಂದು ರಾಶಿಯೊಳ್ ಪ |
ನ್ನೆರಡುಂ ತಿಂಗಳೊಳಮಿರ್ದೊಡಂತದು ಸಂವ ||
ತ್ಸರಮೆಂಬರಗ್ನಿದೇವತೆ |
ವರುಷಂ ಸಾಮಾನ್ಯಮಕ್ಕು ಮರ್ಹದಾ ಸಾ || ೧೭೧ ||

1 ಗೆಯಕ್ಕುಂ ಭಯದಿ ಪಿರಿದು ಮಂಡಲಕೆಲ್ಲಂ॥ ಅಶಾ ॥

ಕಂ|| ಪದಿಮೂಱು ತಿಂಗಳಂ ಪಿಂ |
ಗದೆ ಗುರು ನೆಲಸಿದೊಡೆ [1]ದೈವಮಾದಿತ್ಯಂ ಸಾ ||
ಸದೆ ಪರಿವತ್ಸರಮುಂ ಸಂ |
ಪದಮಕ್ಕುಂ ಪ್ರಜೆಗೆ ಶಾಂತಮೆಂದಂ ಬಿಟ್ಟಂ || ೧೭೨ ||

ಪನ್ನೊಂದು ತಿಂಗಳಿಂ ಗುರು |
ಸನ್ನುತದಿಂದೊಂದು ರಾಸಿಯೊಳ್ ನೆಲಸಿರೆಯುಂ ||
ದುನ್ನತ ಗುರುವಿನ ವರ್ಷಂ |
ಬಿನ್ನಣವೇಂ ಪ್ರಜೆಗೆ ಸುಖಮನಿಷ್ಟಮ[2]ನೀಗುಂ || ೧೭೩ ||

[3]ಇರೆ ಪತ್ತುತಿಂಗಳಿಂ ಸುರ |
ಗುರುವಿದು ವತ್ಸರದ ನಾಮಮಕ್ಕು ಮುದಂ ||
ತಿರಲೆಯ್ದಿಯಿಾಶ್ವರಂ ಕೇಳ್ |
ವರುಷಂ ಭೂತಳಕೆ ಮಧ್ಯಮರ್ಘದ್ದಾ ಸಾ || ೧೭೪ ||

ಗುರುವೀರೇೞುಂ ಮಾಸಮು |
ಮಿರೆ ಪ್ರಾಜಾಪತ್ಯಂ [4]ದೈವಮುದಱ ಪೆಸರಂ ||
ತಿರಲನುವತ್ಸದ ಕಡೆವಡೆ |
ಪರಮಾರ್ಥಂ ಧರೆಗೆ ಬಿಟ್ಟನಾಮತದಿಂದಂ || ೧೭೫ ||*

ಮ|| †...........ಗ್ರಹದೊಳ್ ಶುಕ್ರಾರ್ಕಜರ್ ಮೇಣ್ ಸುಖಾ |
ಷ್ಟಮದೊಳ್ ಮಂದಜನಸ್ತದೊಳ್........................... ||
ಕ್ರಮದೊಳ್ ಕೂಡಿರೆ ತಾಂ ಬಲಾಢ್ಯನೆನೆ ಚಂದ್ರಂ ಶುಕ್ಲಪಕ್ಷಂಗಳೊಳ್ |
ಬುವಿ(ಭೂಮಿ)ಗೆಲ್ಲಂ ಮುಟಿಯಕ್ಕುಮೆಂದಱಿಪಿದಂ ಸವ್ಯುಕ್ತ್ರವರತ್ನಾಕರಂ ||೧೭೬||

---

1 ದೆಯ. 2 ನಿಷ್ಟಮುಮಕ್ಕುಂ. 3 ಇಪ್ಪತ್ತು ತಿಂಗಳೊಳ್ ಗುರುವಿರ್ಪ ವತ್ಸರದ ನಾಮಕಮದಕ್ಕುಂ-ತೀರೆಟ್ಟಿ ಯಿಾಶ್ವರಂ ಕೇಳ್ ವರುಷಂ ಭೂತಳಕೆ ಮಧ್ಯ ಮರ್ಘದ್ವಾಸಾ || ೬ || 4 ದೇಯ(ದೆಯ್ವ) ವರುಷದ ಪೆಸರುಂ ತಿರಲನುವತ್ಸರ ವಡೆವಡೆ......ಬಿಟ್ಟನಮತದಿಂದಂ.

*ಇಲ್ಲಿ ಟೀಕೆ ಒಂದು ಪ್ರತಿಯಲ್ಲಿದೆ— ಬೃಹಸ್ಪತಿ ಪನ್ನೊಂದು ತಿಂಗಳೊಂದು ರಾಶಿಯೊಳಿರಲನುವತ್ಸರಮೆಂಬುದು, ಪದಿಮೂರು ತಿಂಗಳಿರೆ ಪರಿವತ್ಸರಮೆಂಬುದು, ಪನ್ನೊಂದು ತಿಂಗಳಿರೆ (ಯಿರಾದಿ) ಗುರುವರ್ಷಮೆಂಬುದು, ಪದಿನಾಲ್ಕು(ಜ-) ತಿಂಗಳಿರೆ (ಅನುವತ್ಸರ) ಪ್ರಾಜಾಪತ್ಯವತ್ಸರಮೆಂಬುದು, ಪತ್ತುತಿಂಗಳಿದ್ದರೆ ವತ್ಸರಮೆಂಬುದು.

ಆರಾ ಪ್ರತಿಯಲ್ಲಿ ಈ ಪದ್ಯದ ಕೊನೆಯಲ್ಲಿ– || ೭ || – ಎಂದು ಪದ್ಯ ಸಂಖ್ಯೆ ಹಾಕಿ—ಇದು ಬೃಹಸ್ಪತಿ ವರ್ಷದ ಫಲಂ ಸಮಾಪ್ತಂ – ಅಂತು ರಗಳೆ ಹೊರತಾಗಿ, ೭೧೧ ರಗಳೆ ಸಹಿತ ಗ್ರಂಥಲೆಕ್ಕ ೧೬೩೫ಕ್ಕಂ ಬಿಟ್ಟ ಸಮಾಪ್ತಂ ಮಂಗಳ ಮಹಾಶ್ರೀ – ಎಂದು ಪೂರ್ಣವಾಗಿದೆ.

ಆರಾ ಪ್ರತಿಯ ಓಲೆಯ ಪ್ರತಿಯಂತೆ 8 (8×2 ಪಕ್ಕಕ್ಕೆ=16) ಪಂಕ್ತಿ, ಪಙ್ಕ್ತಿ ಒಂದಕ್ಕೆ 64 ಅಕ್ಷರ × 65 ಪತ್ರ–2080 ಗ್ರಂಥ.

† ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರವಿದೆ, ಅಶುದ್ಧ ಮತ್ತು ಅಪೂರ್ಣವಾಗಿದೆ.

ಕಂ|| ಶನಿ ರಾಹು ಕೇತುಕುಜರಿಂ |
ಘನಮೆನಿಸಿದ ಕಲಹಮಕ್ಕು ಮಿನಗುರುಶಶಿಯಿಂ ||
ದಿನಿತಾನುಂ ಸಂಖೆ(ಶಂಕೆ)ಯಿಲ್ಲದೆ ಸಸಿ |
ತನಯನ ಭೃ(ಬ್ರು)ಗುವಾಗಿ ನೋೞ(ಡಿ) ನಿರ್ಭಯಮಕ್ಕುಂ || ೧೭೭ ||*

(ಇಂತು ಗುರುಸಂವತ್ಸರ ಫಲಂ)

ಇಂತು ನಕ್ಷತ್ರಗ್ರಹಸ್ವರೂಪಾಧ್ಯಾಯಂ ದ್ವಾದಶಂ ೨ ಸಮಾಪ್ತಂ.

—ಅಟ್ಟಮತಂ ಸಮಾಪ್ತಂ—



*ಮೈಸೂರು ಓರಿಯೆಂಟಲ್ ಲೈಬ್ರರಿಯ ಪ್ರತಿಯಲ್ಲಿ-ಆದಿಯಿಂದ ಪದ್ಯರಗಳೆಗಳ ಸಂಖ್ಯೆ ೯೪೬-ಎಂದಿದೆ.

# ಪರಿಶಿಷ್ಟ ೧(a)

## ಅಧ್ಯಾಯಗಳಲ್ಲಿ ಮತ್ತು ಒಟ್ಟನಲ್ಲಿ ವೃತ್ತಕಂದಗಳ ಜಾತಿ ಸಂಖ್ಯೆಗಳ ಪಟ್ಟಿಕೆ

| ವೃತ್ತಗಳ ಹೆಸರು | ಅಧ್ಯಾಯಗಳು | | | | | | | | | | | | ಒಟ್ಟು ವೃ. ಸಂಖ್ಯೆ |
|---|---|---|---|---|---|---|---|---|---|---|---|---|---|
| | ಪ್ರಥ. | ದ್ವಿತೀ. | ತೃತೀ. | ಚತು. | ಪಂಚ. | ಷಷ್ಠ. | ಸಪ್ತ. | ಅಷ್ಟ. | ನವ. | ದಶ. | ಏಕಾ. | ದ್ವಾದ. | |
| 1. ಕಂದಂ | 41 | ... | 2 | 12 | 19 | 28 | 107 | 158 | 30 | ... | 28 | 142 | 567 |
| 2. ಚಂಪಕಂ | 3 | ... | .... | 5 | 4 | 10 | 16 | 10 | 11 | ... | 10 | 11 | 80 |
| 3. ಮತ್ತೇಭಂ | 1 | ... | .... | 2 | ... | 5 | 12 | 5 | 1 | ... | 4 | 10 | 40 |
| 4. ಉತ್ಪಲಂ | 1 | ... | .... | 4 | ... | 13 | 8 | 7 | 6 | 4 | 10 | 4 | 57 |
| 5. ಸ್ರಗ್ಧರೆ | ... | ... | .... | .... | ... | ... | ... | ... | ... | ... | .... | 1 | 1 |
| 6. ರಗಳೆ | ... | ... | 3 | .... | ... | ... | ... | ... | ... | ... | .... | .... | 3 |
| 7. ಮಂಗಳಂ | ... | 2 | .... | .... | ... | 1 | ... | ... | ... | ... | .... | .... | 3 |
| 8. ಶಾರ್ದೂಲಂ | ... | ... | .... | 1 | ... | ... | ... | 3 | ... | 1 | 1 | 1 | 7 |
| 9. ಪಿರಿಯಕ್ಕರಂ | ... | ... | .... | 2 | ... | ... | ... | 4 | ... | ... | 13 | 3 | 22 |
| 10. ತ್ರಿವಿಧಿ | ... | ... | .... | .... | 1 | 2 | 7 | 16 | ... | ... | .... | 2 | 28 |
| 11. ಮಣಿವಿಭೂಷಣಂ | ... | ... | .... | .... | ... | 1 | ... | ... | ... | ... | .... | .... | 1 |
| 12. ಮಹಾಸ್ರಗ್ಧರೆ | ... | ... | .... | .... | ... | 1 | ... | ... | ... | ... | 1 | 1 | 3 |
| 13. ತೋಟಕಂ | ... | ... | .... | .... | ... | ... | 1 | ... | ... | ... | .... | .... | 1 |
| 14. ಮಲ್ಲಿಕಾಮಾಲೆ | ... | ... | .... | .... | ... | ... | 1 | ... | ... | ... | .... | 1 | 2 |
| 15. ಸ್ವಾಗತಂ | ... | ... | .... | .... | ... | ... | 1 | ... | ... | ... | .... | 1 | 2 |
| 16. ಷಡ್ಪಳ (ಪ್ರಾಕೃತ) | ... | ... | .... | .... | ... | ... | ... | 1 | ... | ... | .... | .... | 1 |
| ಒಟ್ಟು. ಅಧ್ಯಾ. ವೃ. ಸಂಖ್ಯೆ.... | 46 | 2 | 5 | 26 | 24 | 61 | 153 | 204 | 48 | 5 | 67 | 177 | 818 |

**ಪರಿಶಿಷ್ಟ ೧ (b)**

---

## (೧) ರಾಹುಚಕ್ರಂ




**ಕಂಧರದುದರ**

(ಪುಟ 87ರಲ್ಲಿ ವಿವರಿಸಿರುವುದು)

## (೨) ನಕ್ಷತ್ರಚಕ್ರಂ

ರೋ ಮೃ ಆ
ಕೃ ಪುನ
ಭ ಪುಷ್ಯ
ಅ ಆಶ್ಲೇ

ಹ ಚಿ ಸ್ವಾ
ಉ ವಿ
ಪು ಅನು
ಮ ಜ್ಯೇ

ಶ್ರ ಧ ಶತ
ಉ-ಷಾ ಪೂ-ಭಾ
ಪೂ-ಷಾ ಉ-ಭಾ
ಮೂ ರೇ

(ಪುಟ 32ರ ಟಿಪ್ಪಣಿಯಲ್ಲಿ ವಿವರಿಸಿರುವುದು)

# ಪರಿಶಿಷ್ಟ ೨

## ಗ್ರಂಥಸ್ಥ ವೃತ್ತಕಂದಗಳ ಅಕಾರಾದ್ಯಾದ್ಯಕ್ಷರಾನುಕ್ರಮಣಿಕೆ

## ಪ

ಹ

# ಪರಿಶಿಷ್ಟ ೩

## (ಪ್ರಭವಾದಿ ಷಷ್ಟಿಸಂವತ್ಸರ ಫಲಂ)

---

ಶ್ರೀಪತಿ ಪಶುಪತಿ ವಿದ್ಯಾ |
ಶ್ರೀಪತಿ ರತಿಪತಿ ಗಣಾಧಿಪತಿ ದಿನ(ವಸ)ಪತಿಯೆಂ ||
ಬೀ ಪುರುಷರೀಗೆ ನಮಗಾ |
ಶ್ರೀಪದಮನಾತ್ಮಗುಣಸಂಪದಮಂ || ೧ ||*

ಪ್ರಭವದೊಳೆ ಬೆಳಸು ಮಧ್ಯಮು |
ವಿಭವದಿ ಮೞೆಗಾಲಮಲ್ಪಮುಂಟು ಕೊರೆ(ಱೆ)ಯುಂ ||
ಶುಭಮೆನೆ ಬೆಳೆಗುಂ(ಯು) ಜನಕತಿ |
ಶುಭಮಂ ನೆಱೆ ಮಾೞ್ಕುಮಿನಿತು ನಯಮಂ ತೋರ್ಕುಂ || ೨ ||

ಪಸು ಕಱೆಗು ಮೞೆಗಳುನ್ನತ |
ಪಸರಿಸಿ ಕಾರ್ಕಡೆಯು ಬೆಳೆಗುಮೆಂದು(ಲ್ಲ)ಜನ(ಗ)ಕ್ಕಂ ||
ದೊಸಗೆ ಮನೆಮನೆಯೊಳೆಲ್ಲರಿ |
ಗೆಸೆದಿರೆ ವಿಭವಾಬ್ದಮದು ವಸಂತಂ ಸಂತಂ || ೩ ||

ಪೞ್ತಿ (ಹತ್ತಿ) ಯುನುಪ್ಪಂ ಸಂಗ್ರಹಿ |
ಸೞ್ತಿ(ರ್ಥಿ)ಯೊಳವು ಬೆಳೆಯವುೞಿದ ಧಾನ್ಯಂ ಬೆಳೆಗುಂ ||
ಕೀರ್ತಿಸೆ ಪಸು ಕಱೆಗುಂ ಜಗ |
ದರ್ಥನೆ ಶುಭಮೆನಿಸೆ ಶುಕ್ಲವರ್ಷಂ ಹರ್ಷಂ || ೪ ||

ಕಬವೆ ನೆಲ್ಕುರ್ವುರ್ವಿಂ ಬೆಳಸಾಗವು |
ಮೞೆಯು ಉೞಿದುವೆಲ್ಲಂ ಬೆ[ಳೆಗುಂ ಭೂಮಿ]ಪ ||
ರೞಿಗುಂ ಪ್ರಜೆಗಂ |
ಪಳೆಮಿೞಿಲ್ಲದಱಿಂ ಪ್ರಮಾಥಿವರುಷಂ ಪಡೆಗುಂ || ೫ ||

........ದಿಳೆ ಸಂಪದಮಂ ತಾ |
ಳ್ದಿರೆ ಮನುಷ್ಯಪಶುಮೃಗಜೀವಾಭ್ಯುದಯಕರಂ ||
ಕರಮೆನೆ ಪೊ...................... |
........ ಹರುಷದೊಳ್ ಪ್ರಜೋತ್ಪತ್ತಿವರುಷಂ ? || ೬ ||

---

*ಇಲ್ಲಿಂದ (೮೩೮–೮೪೯) ಎಂಬ ಸಂಖ್ಯೆಯುಳ್ಳ ಈ ೧೨ ಪದ್ಯಗಳು ಮೈಸೂರ್ ಸರ್ಕಾರದ ಲೈಬ್ರರಿಯ ಪ್ರತಿಯ ಕೊನೆಯ ಭಾಗದಲ್ಲಿದೆ. ಈ ಒಂದನೆಯ ಪದ್ಯಕ್ಕೆ ಹಿಂದಣ ಗ್ರಂಥಸಂಖ್ಯೆಯೊಡನೆ ನಿರಂತರವಾಗಿ ೮೩೮ ಎಂಬ ಸಂಖ್ಯೆಯನ್ನು ಕೊಟ್ಟಿದೆ. ಗ್ರಂಥವು ಅಸಮಾಪ್ತವಾಗಿದೆ.

ಪನ್ನೆರಡು ಧಾನ್ಯಮುಂ ಬೆಳೆ |
ದೆನ್ನರು(ಉ)ತ್ತಿಮೆಂಡವರು ಗೋಲುಕರದೆಡೆ ಬೆಳೆಯಿಂ ||
ದನ್ನೆ(ನ್ನಾ್ಯ)ಯುಮುಕ್ಕು ಮಾಗಿರೆ |
ದು(ಯು)ನ್ನತ ಸಂಘಾತಮೆನಿಪುದಘಟಿತಘಟಿತಂ || ೭ ||

ಮಡಗೆನಿತು ಧಾನ್ಯವನಿತಂ |
ಯೆಡೆಯುಡುಗದೆ ಬೆಳಸುಮರ್ಘಮುಂ ಮಟಿಯುಂ ಕಾ ||
ರ್ಗಡೆ ಬೆಳೆಗುಂ ಪ್ರಜೆಗೆ ಭಯಂ |
ನಡುಕಂ ಶ್ರೀಮುಖದ ಪೂಱದಹಿಮುಖ ಸದೃಶಂ || ೮ ||

ಕುಜನತಿವಕ್ರಿಸೆ ಮಟಿಯಿಂ |
ಸೃಜಿಯಿಸಿದಂ ಧೂಮಕೇತುವುದಯಿಸೆ ಬೆಳೆಸಿ ||
ಲ್ಲಜೆಯುಂ ರುಜೆಯಿಂ ನವೆಗುಂ |
ಪ್ರಜೆಯೆಂಬಱ ಭಾವವರ್ಷ ಮಘಕುಳವರ್ಷಂ || ೯ ||

ಯುವವೆಂಬ ವರುಷದೊಳ್ ಸಂ |
ಭವಿಕುಂ ಜನಕೆಲ್ಲ ಕೊವ್ವ್ರ(ಬ್ಬ್ರ) ನೃಪರಿಂ ಪಸವುಂ ||
ತವಿಕುಂ ರುಜಾಗ್ನಿಭಯಂ ಸಂ |
ಭವಿಕುಂ ಮಟಿಯಲ್ಪಮದಱ [ಬೆಳ] ಸುಂ ಸ್ವಲ್ಪಂ || ೧೦ ||

ಧಾತುವಿನೊಳಗ್ನಿ ಗರ್ಭನಿ |
ಪಾತ ಮಹಾಜ್ವರ ಭಯಂಗ[ಳಿಲ್ಲಂ] ಬೆಳಸುಂ ||
ಭೂತಳದೊಳರ್ಘಮಿಲ್ಲಂ |
ದೀತೆರದಿಂ ಪೇೞ್ದ ಬಲ್ಲನುವರರೆಗೆಲ್ಲಂ || ೧೧ ||

ಈಶ್ವರದೊ....................... |
........ರೆನಿಪರ್ ಸಮಸ್ತಧಾನ್ಯಂ ಬೆಳೆಗುಂ ||
ದೇಶದೊಳರ್ಘಮುಮಿಲ್ಲಂ |
ಲೇಸೆನಿಸಿ ಬೆಳೆ ..................... || ೧೨ ||

..........................ದೆಯೊ |
ಳೆಸೆ ವೀಕನ್ನಡಿಗರಿಱದು ಸಾವರ್ ತಮ್ಮೊಳ್ ||
ವಸುಮತಿಯೊಳ್ ವಿಶ್ವಾವಸು |
ವೆಸೆದಿರೆ ಬಱನವಸೆಯುರ್ಗೆ ಮಾರಿಯೆ ಘೋರಂ || ೩೯ ||*

*ಆರಾ ಪ್ರತಿಯಲ್ಲಿ ಇಲ್ಲಿಂದ ಗ್ರಂಥವು ಆರಂಭವಾಗಿದೆ. ಆದಿಯ ೬೨ ಕಂದಗಳಿಲ್ಲ. ಈ ಕಂದಗಳಲ್ಲಿ ೬೦ ವರುಷಗಳ ಫಲದಲ್ಲಿ ಇಲ್ಲಿಂದ ಹಿಂದಣ ೨೮ ವರುಷಗಳ ಫಲವನ್ನು ಹೇಳುವ ಕಂದಗಳೂ ಗ್ರಂಥಾದಿಯ ಮಂಗಳಪದ್ಯಾದಿಗಳೂ ಇದ್ದಿರಬಹುದು.

ಪರಿ(ರ)ಭವದೊಳ್ ಮಱಿ ಕಱಿಗುಂ |
ಧರೆ ಬೆಳೆಗುಂ ಸುಖುಮನೆಯ್ದುಗುಂ ನರರೆಲ್ಲಂ ||
ಪರಿಭವದೈತ್ಯ(ರ್ಗ)ೀಗಕ್ಕುಂ |
ವರ ಜಿನಮಾರ್ಗದೊಳೆ ಪೇೞ್ದ ಬಿಟ್ಟಬೆಡಂಗಂ || ೪೦ ||

ಅೞಗುಂ ಮೂಱು ಪೊಟಲ್ಗಳು |
ಮಱವೆಳಸಕ್ಕುಂ ಬಱನು [1]ವಿಬ್ದಿಯುಂ ಪಿರಿದಕ್ಕುಂ ||
ಅಟಲಕ್ಕು ಪ್ರಜೆಗೆ ನಿರುತಂ |
ಮಱಿ ಪಿರಿದಿಲ್ಲ ಪ್ಲವಂಗದೊಳ್ ರುಜೆ [ಪಿರಿದು]ಂ || ೪೧ ||

ಕೀಳ ಮಱಿ ಕಱಿಗು ಕಡೆವರ |
ಶಾಳಿಪ್ರ ಮುಖಂಗಳೆಯ್ದೆ ಬೆಳೆಗುಂ ಧಾನ್ಯಂ ||
ಕೀಳಕ ಸಂವತ್ಸರದೊಳ್ |
ಪಾಳಿಸುವರ್ ನ್ಯಾಯದಿಂದೆ ಭೂಪರ್ ಧರೆಯಂ || ೪೨ ||

ಕಾರುಂ ಕಡೆ[ಯುಂ ಬೆ]ಳೆಗುಂ |
ಧಾರಿಣಿಯೊಳ್ [2]ನೋ(ನಾ)ಡೆ ಜನಕೆ ಪರಮೋತ್ಸಾಹಂ ||
ಅರಯ್ದು ನೋಡೆ ಯರ್ಘಮು |
ಬಾರಿಪರಾರ್ ಸೌಮ್ಯವೆಂಬ ಸಂವತ್ಸರದೊಳ್ || ೪೩ ||

ಪೆಸಱುಂ ಜೋಳವು ........... |
ಮಸದಳಮೆನೆ ಬೆಳೆಗು ಮುೞದ ಬೆಳಸಿನಿಸಲ್ಪಂ ||
ವಸುಧೆಯೊಳಂ ಇ(ಯಿ)ದನಱವುದು |
ಕುಶ(ಸ)ಲರ್ ತಾವೊಪ್ಪಿರ್ಪ ಸಾಧಾರಣದೊಳ್ || ೪೪ ||

ಉನ್ನತ ಬೆಳಸಾಗು [ವುದಿಸಿ] |
ಸನ್ನಂ ಪುಟ್ಟಗೆಯಮರ್ಘ ಕಿಱಕಿಱದಕ್ಕುಂ ||
ಸನ್ನುತವಾಗದು ಗೋಕುಲ |
ವಿನ್ನಿದ[3]ನಱ [ನೀಂ] ವಿರೋಧಿಕೃತು (ಸಂ)ವತ್ಸರದೊಳ್ || ೪೫ ||

ಪರಿಧಾವಿಯೆಂಬುದದಱೊಳ್ |
ಪಿರಿದುಂ ...........ಸಂಪತ್ತಿ ಲವಣಂ ತೈಲಂ ||
ಪಿರಿದಾಗೆ ಕಱಿಗು ಗೋಕುಲ |
ನಿರುತಂ ಪರಮಾರ್ಘ ಬಾಧೆ ಬೆಂಕೆ(ಕಿ)ಯೊಳಕ್ಕುಂ || ೪೬ ||

ತಪ್ಪದೆ ಬೆಳೆವುದು ಬೆಳಸಿನಿ |
ಸಪ್ಪುದು ಮಱಿ ಕುಸಿಗುಮರ್ಘ [ಕಾರ್] ಬೆಳಸಕ್ಕುಂ ||
ಮಪ್ಪ(ಲ್ಪ)? ಪಶು ಸೀ(ಶೀ)ರೆ ಪೊನ್ನ(ಗೆ)ಮೆ |
ತಪ್ಪದು [4]ಕೀಳ್ ಪ್ರಮಾಧಿ(ಜ)ಜಿತ ಸಂವತ್ಸರದೊಳ್ || ೪೭ ||

---

1 ವೃದ್ಧಿಯಂ. 2 ಜನಕ್ಕೆ ನಾಡೆ ಪರಮೋತ್ಸಹಮುಂ. 3 ನಯವಿನಿರೋಧಿ. 4 ಕೀಳಪ್ರಮಾದೀಚ ಸಂವ, ಕೀಳ ಪ್ರಮಾದಿ ಜಿತಸಂವ.

ಬೆಳೆವುದು ಕರ್ವುರಂ ಕಱವೆಯು |
ಬೆಳುವೊಲ ನೆಲ್ಲುೞಿದ ಧಾನ್ಯವೞಿವೆಳಸಕ್ಕುಂ ||
ಫಳಮಿದ ನೞಿಗೆ [ಧಂರಾ]ವುಂ |
ಡಳದೊಳಗಾನಂದವೆಂಬ ಸಂವತ್ಸರದೊಳ್ || ೪೮ ||

ಬೆಳೆವುದು ಧರಾತಳಂ ಕಡೆ |
ಮೞೆ ಕಱೆವುದು ಪಸವಿನೊಂದುದೆಸೆಯಿಂ ಪಸುಗಳ್ ||
ಇಳೆಯೊಳ್ ರೋಗದೆ ಸಾಗುಂ |
ತಿಳಿವುದು ರಾಕ್ಷಸ[ವು]ವೆಂಬ ಸಂವತ್ಸರದೊಳ್ || ೪೯ ||

ಇಳೆಗೀಶರ ಬಾಧೆ ಕರಂ |
ಬೆಳಸೊಂದುಂ ಬೆಳೆಯದದಱ ಸಾವಿಂ ಕೇಡಿಂ ||
ದೞಿವರ್ ಪಲಂಬರಿಂತಿದು |
ನಳಸಂವತ್ಸರದ ಫಲ[1]ಮುನಱಿ ನೀಂ ಧರೆಯೊಳ್ || ೫೦ ||

ಕಾರ ಮೞೆಯಿಲ್ಲ ಕಡವೞೆ |
ನೇರಿದುವೆನಿಸಿರ್ದ ಅವರೆ ಗೋದುವೆ ಜೋಳಂ ||
ಸಾರಸವೆನೆ ಬೆಳಸಕ್ಕುಂ |
ಧಾರಿಣಿ ಪರಬಾಧೆ ಪಿಂಗಳಾಬ್ದದೊಳಿಲ್ಲಂ || ೫೧ ||

ಕಡೆವೆೞೆ ಮಧ್ಯಮುಮೆನಿಕುಂ |
ಕಿಡುಗುಂ ಜೀವಧನಮುಮಗ್ನಿ ಬಾಧೆಗಳಿಂದಂ ||
ಪಡೆವಾತೇಂ ಬೆಳಸಲ್ಪಂ |
ಕಿಡುಗುಂ ಧರೆ ಕಾಳಯುಕ್ತಿ(ಕ್ತ) ಸಂವತ್ಸರದೊಳ್ || ೫೨ ||

ಮುಂಚಿದ ಕಾರ್ಮೞೆ ಸುರಿದೊಡೆ |
ಸಂಚರಿಸದೆ ...........ಮೆಬಿವುಂ ಪೆರ್ಬೆಳಸುಂ ||
ಸಂಚಳ ಸಮಸ್ತಧಾನ್ಯಂ |
ವಂಚಿಸಿ ಸಿದ್ಧಾರ್ಥಿಯೆಂಬ ಸಂವತ್ಸರದೊಳ್ || ೫೩ ||

ಪಲಬರ್ ಮನ್ನೆಯರೞಿಗುಂ |
ನೆಲ ನೊಯ್ಯನೆ ಬೆಳೆಗು ವಿಬ್ದಿಯುಂ ಪಸ(ಫಲ)ವಕ್ಕುಂ ||
ಪಲವುಂ ಗೋಕುಲಮೞಿಗುಂ |
ಸಲೆ ಕನ್ನಡನಾಡೆ ರೌದ್ರಿ ಸಂವತ್ಸರದೊಳ್ || ೫೪ ||

ಕಱೆವುದು ಮೞೆ ಬೞವುದು ನೆಲ |
ನೆಱೆ ನೋಡಿರೆ ಗೋಧಿ ಕಡಲೆಯುಂ ಪಿರಿದಕ್ಕುಂ ||
ಕಱೆಗುಂ ದನ ದುರ್ಮತಿಯೊಳ್ |
ಬೞ ತಪ್ಪದು ಬಗೆಯೆ ಬಾಧೆ ಬೆಳ್ವೊಲದೇಶಂ || ೫೫ ||

ಪದ ಮುೞಿ ಕೞಿವುದು ಬೆಳೆ |
ವುದು ಪದವಟ್ಟುೞಿ ಸಕಲಧಾನ್ಯ ಕೊಡವಾಲಿಂದಂ ||
ಪೊದೞ್ದಾಪುರ ಗೋಕುಲಮುಂ |
ಮುದದಿಂ ದುಂದುಭಿಯೊಳೆಯ್ದೆ ಸುಖದಿಂ ಬಾೞ್ಗುಂ || ೫೬ ||

ಮೞೆಯುಂ ಬೆಳಸುಂ ಪಿರಿದೆನೆ |
ಲೞಿವವರಾರ್ ಬೆದಲಧಾನ್ಯಮಂ ಧರೆ ಸುಖದಿಂ ||
ದುೞಿವುದು ಕಾರ್ಗಾಲದೊಳಂ |
ತಿಳಿ ರುಧಿರೋದ್ಗಾರಿಯೆಂಬ ಸಂವತ್ಸರದೊಳ್ || ೫೭ ||

ಬೆಳಸಿನಿಸಿಲ್ಲಲ್ಪಫಲಂ |
ಮೞೆಯಾಗದು ವರ್ಣನಾಲ್ಕ(ಮೂಱ)ಱೊಳ್ ಭೂಪರೊಳಂ ||
ಬೆಳೆವುದು ಧರ್ಮಂ ಬಾಧೆ |
ಗಳೊಳವೀ ರಕ್ತಾಕ್ಷಿಯೆಂಬ ಸಂವತ್ಸರದೊಳ್ || ೫೮ ||

ಸುರಿವ ಮೞೆಯಿಂದೆ ತೊಱೆಗಳ್ |
ಪಿರಿದಪ್ಪುವು ಬೆಳಸು ಬೆಳೆಗು ತಪ್ಪದೆ ನಾಡೊಳ್ ||
ಧರೆಯೊಳ್ ಗಜ(ಜನ)ಘರ್ಜನೆಯಿಂ |
ನರರಂಜುಗು ಕ್ರೋಧನಮುಮೆಂಬ ಸಂವತ್ಸರದೊಳ್ || ೫೯ ||

ಮೊಕ್ಕಳಮಾಗದು ಕಿಱುಕಿಱು |
ದಕ್ಕಂ ಮೞೆ ಬೆಳಸುಮಾದೊಡಂ ಭಯರಸ ತಾ ||
ನಕ್ಕಂ ಕ್ಷಿತಿಪರ ಕಾಳೆಗ |
ಮಕ್ಕಂ ಕ್ಷಯವತ್ಸರಂ ಪ್ರವರ್ತಿಸೆ ಲೋಕಂ || ೬೦ ||

ಶ್ರೀಮನ್ಮೇಘಾಡಂಬರ |
ವೀಮಹಿಗಂ ಕಱೆಗು(ಗೆ)ಮೞೆಯನೊಳ್ಪಿಹವೆನಲುಂ ||
ಕ್ಷೇಮದೆ ಧಾನ್ಯಂ ಬೆಳೆಗುಂ(ಗೆಮು) |
ಈ(ಹಿಂ)ಮನುಜರ್ ಸುಖದಿನಿರ್ಕೆಯಾಚಂದ್ರಾರ್ಕಂ || ೬೧ ||

—ಸಂವತ್ಸರ ಫಲಂಗಳ್ ಸಮಾಪ್ತಂ—

ಮಂಗಳ ಮಹಾಶ್ರೀಶ್ರೀಶ್ರೀ.

---

1 ದಱಿದಿರು.

* ಇಲ್ಲಿಂದ ಮುಂದೆ "ಧರೆ ಬಣ್ಣಿಸೆ" ಎಂಬ ಗ್ರಂಥಭಾಗವು ಅರಾ ಪ್ರತಿಯಲ್ಲಿ ಆರಂಭವಾಗಿದೆ.

# ತಿದ್ದುಪಡಿ

## ಮತ್ತು ಪಾಠಾಂತರ

| | | | |
|---|---|---|---|
| 1 | 4 | ವಿರಕ್ತಿಯಱಿವುವ | ಮೆಂದುತಿಳಿವುವ |
| ,, | 6 | ಕ್ಷಿಸಲೆವದಡೆ | ಕ್ಷಿಸಲೆವಡೆದ |
| 2 | 13 | ರ್ಚದ–ಬಾಡ | ರ್ಚಸಿದಂತೀವಂ ನಾಲ್ಕುಬಾಡವಂದಯಿಯಿಂದಂ |
| 3 | 15 | ಕತಮೆಱೆವಂ | ಕೃತಮುಱಿಯಾ |
| ,, | | ಕುಂಚ | ಕುಂಬ |
| ,, | 16 | ತನಯಂ ಮಾಚಂ | ತನಯ ದೋರಂ(ಕವಿ.ಪಾ) |
| ,, | 20 | ಬೆಸತೆಗೆ | ಬೆಸುಗೆಗೆ |
| 4 | 24 | ಜನಭಕ್ತರೊಳ್ಪಿನ | ಜಿನಭಕ್ತನೊಳ್ಪಿನ |
| 6 | 40 | ಮಟಿಯುಃಕ್ಕಂ | ಮುಱಿಸುಕ್ಕಂ |
| 8 | 1(ಪಂ.4)ಕಡಿವೊಡಂ | | ಕಡಿವೊಡಂ ಕಾಂತಿಗಿಡುವೊಡಂಕೂಟಿಮೆರೆವುಪ್ಪು |
| | ,,(ಪ.13)ದೇಗುತಿರ್ಪೊಡಂ | | ಕೇಗುತಿರ್ಪೊಡಂ ಕೆಲಕೆಲ ಸಿರುಪೆ ನೆಗೆವೊಡಂ |
| 9 | 1 | ಯೆಕ್ಕೆಲು | ಯೆಕ್ಕೆಲ |
| ,, | 25 | ದೀಪ್ತಿಗೆಟ್ಟಂದು | ದೀಪ್ತಿಯಿಂದುವಿನವೊಲಿರೆತಾಂಘನಾಳಿ (ಕ.ಪಾ.) |
| 17 | 27 | ರುಚಿ[ಯತಿ] | ರುಚಿಗಳ್ (ಕವಿಚರಿತೆಪಾಠ) |
| 18 | 2 | ಬಿಳದಾದೊಡ | ಬಿಳಿದಾದೊಡಿರುಳಾಡಾಗಳ್(ಕವಿ.ಪಾಠ) |
| 23 | 7 | ಬಳೆಗುಂ | ಬೆಳೆಗುಂ |
| 39 | 49 | ಶಾಂ | ಸಾಂ |
| | 52 | ,, | ,, |
| 49 | 117 | (ಗ್ರಹವಕ್ರಂ) | (ಗ್ರಹವೇಧಂ) |
| 53 | 146 | ತನೂಜಗೆ | ತನೂಜೆಗೆ |
| 87 | 4 | [ನಲ್ಲ]ದಿರುಂ | [ನಲ್ಗ]ದಿರುಂ |
| 97 | 9 | ಸಿರದೆ | ಸೆರಡು |
| | 10 | ಪಡಿವ | ಪಡುವ |
| 98 | 14 | ಮಿಪ್ಪುರು | ಮುಪ್ಪುರು |
| 102 | 46 | (ನೆಡ್ಡಿ) | ನಾಲ್ಕು |
| 103 | 50 | ಮಳಲ | ಮಱಲ |
| 105 | | 50 | 49(ಇಲ್ಲಿಂದ ಮುಂದೆ 69ರವರೆಗೂ ಒಂದೊಂದು ಪದ್ಯಸಂಖೆ ಕಡಿಮೆಯಾಗಿಓದಿಕೊಳ್ಳುವುದು). |
| 104 | 62 (1) | ಪಾವೆಡೆ | ಪೋ. ಡೆಗೋ(ಕ. ಪಾ) |
| | | ಕಟ್ಟುಗೆ | ಕಟ್ಟಸು ಕರ್ಚ (ಕ. ಪಾ.) |
| | | ನೀಳ್ದಗುಟಿ | ನೀಳ್ದಗಲೆ (ಕ. ಪಾ.) |
| | | ಭಾರಕಂ | ಬಾಱಕಂ (ಕ. ಪಾ.) |
| | | ಮುಸ್ತೆಯಿಪ್ಪೆ | ಮುಸ್ತೆಯಂ ಕೇ. (ಕ. ಪಾ.) |
| | | ಕಲಸ...ಲೊಳ್ | ಕೆಲಸ....ಬಾಱದೊಱೊಳ್ (ಕ. ಪಾ.) |
| | | ಮೆಂಗೆ | ಮಾಗೆ (ಕ. ಪಾ.) |